# ಸತೀ ಬೃಂದಾ

ಎಂ. ಬಿ. ಗೌರಮ್ಮ ಅಚ್ಯುತರಾವ್

1948

ಪ್ರಕಾಶಕರು :

ಸತ್ಯಶೋಧನ ಪ್ರಕಟನ ಮಂದಿರ

ಕೋಟೆ, ಬೆಂಗಳೂರು ನಗರ.

ಮೊದಲನೆಯ ಮುದ್ರಣ : ೧೯೪೮



ಬೆಲೆ : ಸಾದಾ : ಒಂದು ರೂಪಾಯಿ
ಕ್ಯಾಲಿಕೋ : ಎರಡು ರೂಪಾಯಿ

ಮುದ್ರಕರು :
**ದಿ ಈಸ್ಟರ್ನ್ ಪ್ರೆಸ್**
೧೧-ಎ, ಜಯಚಾಮರಾಜೇಂದ್ರ ರಸ್ತೆ
ಬೆಂಗಳೂರು ನಗರ

## —ವಿಜ್ಞಾಪನೆ—

ಬೃಂದಾವನದ ಪೂಜೆಯು ನಮ್ಮ ಸ್ತ್ರೀವರ್ಗಕ್ಕೆ ನಿತ್ಯಕರ್ಮವಾಗಿದ್ದರೂ ಬೃಂದೆಯು ಯಾರು? ಆಕೆಯ ಮಹಿಮೆಯೇನು? ಎಂಬ ವಿಚಾರವು ಅಷ್ಟು ಪ್ರಚಾರದಲ್ಲಿಲ್ಲ. ಅದನ್ನು ತಿಳಿಯಬೇಕೆಂಬ ಕುತೂಹಲದಿಂದ ಕೆಲವು ಗ್ರಂಥಗಳನ್ನು ನೋಡುತ್ತಿದ್ದಾಗ ಮಹಾಶಿವಪುರಾಣದಲ್ಲಿನ ಜಲಂಧರ ಚರಿತ್ರೆ ಎಂಬ ಕಥೆಯಲ್ಲಿ ಬೃಂದಾದೇವಿಯ ಪಾತಿವ್ರತ್ಯ ಪ್ರಭಾವವು ವರ್ಣಿಸಲ್ಪಟ್ಟಿತ್ತು. ಪುರಾಣ ಪ್ರಸಿದ್ಧರಾದ ಸೀತೆ, ಸಾವಿತ್ರಿ, ದಮಯಂತಿ ಮೊದಲಾದ ಪತಿವ್ರತಾಶಿರೋಮಣಿಗಳ ಸಾಲಿನಲ್ಲಿ ಬೃಂದಾದೇವಿಯನ್ನು ಸೇರಿಸಬಹುದು. ಇಂತಹ ಸಾಧ್ವೀಮಣಿಯ ಮಹಿಮೆಯನ್ನು ನಮ್ಮ ಕರ್ಣಾಟಕ ಬಾಂಧವರಲ್ಲಿ ಪ್ರಚುರಪಡಿಸಬೇಕೆಂಬ ಉದ್ದೇಶ್ಯದಿಂದ ಶಿವಜಲಂಧರ ಕಾಳಗದ ಕಥಾಸಂವಿಧಾನವನ್ನು ಸಂಗ್ರಹ ಮಾಡಿ ಸಮಯೋಚಿತ ಅಲ್ಪ ವ್ಯತ್ಯಾಸದೊಡನೆ ಹಿರಿಯರ ಸಲಹೆಯಂತೆ **"ಸತೀ ಬೃಂದಾ"** ಎಂಬ ಹೆಸರಿನಿಂದ ಈ ಗ್ರಂಥವನ್ನು ರಚಿಸಿರುತ್ತೇನೆ.

ಕಾವ್ಯರಚನೆಯಲ್ಲಿ ನನಗೆ ಹೆಚ್ಚು ಪರಿಶ್ರಮವಾಗಲಿ ಪಾಂಡಿತ್ಯವಾಗಲಿ ಇಲ್ಲ. ಆದರೂ ಸ್ವಾಭಾವಿಕವಾಗಿ ಮೂಡಿದ ಭಾವನೆಗಳನ್ನು ಭಾಮಿನೀ ಷಟ್ಪದಿ ರೂಪದಲ್ಲಿ ಬರೆದಿದ್ದೇನೆ.

ಕಾವ್ಯರಚನೆಯಲ್ಲಿ ಅಶ್ಲೀಲಕ್ಕೆ ಅವಕಾಶವಿಲ್ಲದಂತೆ ಅಕಳಂಕಿತ ಪಾತಿವ್ರತ್ಯದ ಸೂಕ್ಷ್ಮತಮ ಸ್ವರೂಪವನ್ನು ನಿರೂಪಿಸಲು ಪ್ರಯತ್ನ ಮಾಡಿರುತ್ತೇನೆ.

ಈ ಗ್ರಂಥರಚನಾಕಾಲದಲ್ಲಿ ಅನೇಕ ಸಲಹೆಗಳನ್ನಿತ್ತು ಪ್ರೋತ್ಸಾಹಿಸಿದ ಮಾಗಡಿಯ ತಾಲ್ಲೂಕು, ಕಲ್ಯದ ಉಪಾಧ್ಯಾಯರಾಗಿದ್ದ ದಿವಂಗತ ಶ್ರೀ. ಎನ್. ಲಿಂಗಣ್ಣಯ್ಯನವರ ಉಪಕಾರವನ್ನು ಮರೆಯಲಾರೆ. ಈ ಗ್ರಂಥವನ್ನು ಪರಿಶೋಧಿಸಿಕೊಟ್ಟು ಸಹಾಯಮಾಡಿದ ಪಂಡಿತರುಗಳಾದ ಮ॥ರಾ॥ ಶ್ರೀ॥ ಕೆ. ಶ್ರೀಕಂಠಶಾಸ್ತ್ರಿಗಳವರಿಗೂ ಎಸ್. ರಾಮಶಾಸ್ತ್ರಿಗಳವರಿಗೂ ನಾನು

ಚಿರಋಣಿ. ಕಡೆಯದಾಗಿ ಈ ಕಾವ್ಯವನ್ನು ಪ್ರಕಟಣೆಗೆ ಸಿದ್ಧಪಡಿಸಲು ಆಮೂಲಾಗ್ರವಾಗಿ ಪರಿಶೋಧಿಸಿ ಸೂಕ್ತ ಮಾರ್ಪಾಡುಗಳನ್ನು ಸೂಚಿಸಿದ, ಆಸ್ಥಾನ ವಿದ್ವಾನ್ ಮ||ರಾ||ಶ್ರೀ|| ವೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿಗಳಿಗೂ ಮತ್ತು ಇದನ್ನು ಮುದ್ರಣಮಾಡಿಸಿ ಪ್ರಕಾಶಕ್ಕೆ ತರಲು ನೆರವಾದ ಸತ್ಯಶೋಧನ ಪ್ರಕಟನ ಮಂದಿರಕ್ಕೂ ನನ್ನ ಅನಂತ ವಂದನೆಗಳು.

ಈ ಕಾವ್ಯಕ್ಕೆ ೧೯೪೪-೪೫ನೇ ಸಾಲಿನಲ್ಲಿ ದೇವರಾಜ ಬಹದ್ದೂರ್ ಸಾಹಿತ್ಯ ಬಹುಮಾನವು ದೊರೆತುದರಿಂದ ಈ ಸಹಾಯವನ್ನು ಅತ್ಯಂತ ಕೃತಜ್ಞತೆಯಿಂದ ಸ್ವೀಕರಿಸಿ ಈ ಮೂಲಕ ಗ್ರಂಥವು ಪ್ರಚಾರಕ್ಕೆ ಬರಲು ಅವಕಾಶವಾದುದಕ್ಕಾಗಿ ಸಂತೋಷಪಡುತ್ತೇನೆ.

ಇತೀ ಸಜ್ಜನ ವಿಧೇಯಳು,

**ಎಂ. ಬಿ. ಗೌರಮ್ಮ ಅಚ್ಯುತರಾವ್**

ಹುಲಿಕಲ್, ಮಾಗಡಿ ತಾಲ್ಲೂಕು.

ಶ್ರೀರಾಮ ಸಹಾಯ

# ಸತೀ ಬೃಂದಾ

---

ಶ್ರೀ ಲಲಿತ ಸರಸಿಜ ಪದದ್ವಯ
ಶೂಲಧರ ಪರಶಿವನೆ ದೇವ ಕ-
ಪಾಲಿ ಶಂಕರ ನಾಗಭೂಷಣ ನಿಗಮಗೋಚರನೆ
ಫಾಲಲೋಚನ ಪಾರ್ವತೀಪತಿ
ಬಾಲಮಾರ್ಕಂಡೇಯವರದನೆ
ಪಾಲಿಸೆಮ್ಮನು ಭಕ್ತವತ್ಸಲ ಕಾಲಭೈರವನೆ ೧

ಶ್ರೀವಿನಾಯಕ ಸುಜನಪಾಲಕ
ದೇವತತಿಪೂಜಿತಪದಾಂಬುಜ
ಪಾವನನೆ ಫಣಿಭೂಷಣನೆ ಶುಭಕರನೆ ಗಜಮುಖನೆ
ಭಾವಜಾರಿಯ ಸುತನೆ ನಿನ್ನಡಿ
ದಾವರೆಯ ನೆನಹಿತ್ತು ದಯೆಯೊಳು
ಕಾವುದೆಮ್ಮನು ಲೋಕವಿನುತನೆ ಎಡರನಳಿದೊಲಿದು ೨

ರಾಮ ರವಿಕುಲಸೋಮ ಶುಭಗುಣ
ಧಾಮ ಸೀತಾರಾಮ ರಿಪುಗಣ
ಭೀಮ ಮೌನಿವ್ರಾತಸೇವಿತಸಕಲಶುಭಕಾಮ
ಕಾಮಪಿತ ಕರುಣಾನಿಧಿಯೆ ರಘು
ರಾಮ ಮಂಗಳನಾಮ ಸುಜನ
ಪ್ರೇಮ ದಶರಥರಾಮ ದುರಿತವಿರಾಮ ಸಲಹೆಮ್ಮ ೩

ವಾಣಿ ವೀಣಾಪಾಣಿ ಪನ್ನಗ
ವೇಣಿ ನಾರೀಜನಶಿರೋಮಣಿ
ಪಾಣಿಯುಗಳವ ಮುಗಿವೆ ಭಾರತಿ ವಾರಿಜಾನನೆಯೆ
ಏಣಲೋಚನೆ ವಿಮಲಸುಗುಣ
ಶ್ರೇಣಿ ಭಕ್ತರ ಕಲ್ಪಲತೆ ಬ್ರ-
ಹ್ಮಾಣಿ ಬೇಡುವೆನವ್ವ ಕರುಣಿಸು ಕೃತಿಗೆ ಮಂಗಳವ ೪

ವಸುಮತಿಯೊಳಾ ವ್ಯಾಘ್ರಶಿಲೆಯೊಳು
ವಸತಿಯಾಗಿರೆ ಕರಣಿಕಾಗ್ರಣಿ
ಎಸೆವನಾ ಶ್ರೀಕಂಠ ಬುಧಸಂಜಾತನಚ್ಯುತನ
ಕಿಸಲಯೋಪಮಕರ ಪಿಡಿದು ಕ
ಟ್ಟೆಸಕದಿಂ ಸತಿಧರ್ಮವಾಂತಾ
ಪಶುಪತಿಯ ಚರಣಾಬ್ಜಸೇವಾಸಕ್ತೆ ಗೌರಮ್ಮ ೫

ಪರಮಪುರುಷನ ಭಕ್ತರಿಗೆ ಭೂ-
ಸುರ ಸಮೂಹಕೆ ವರಪತಿವ್ರತೆ
ಯರಿಗೆ ಮಾತಾಪಿತೃಗಳಿಗೆ ಗುರುಗಳಿಗೆ ಪತಿಪದಕೆ
ಎರಗಿ ಭಕ್ತಿಯೊಳಾನೊರೆವೆ ಸ-
ಚ್ಚರಿತೆ ಸಾಧ್ವೀರತ್ನವೆನಿಸುತೆ
ನೆರೆಮಹಿಮೆಯಿಂ ಮೆರೆವ ಬೃಂದಾದೇವಿ ಚರಿತವನು ೬

ಸರಸಿಜದ ರಜವನು ವಿಸರ್ಜಿಸಿ
ವರಮಧುವನಾರಡಿಯು ಸೇವಿಪ
ತೆರದೊಳಂಚೆಯು ಪಯವ ಸವಿದಾ ಜಲವನುಳಿವಂತೆ
ಸರಸಕಾವ್ಯದೊಳಿರ್ಪ ದೋಷವ
ತೊರೆದು ಗುಣವನೆ ಸವಿದು ಸುಜನರು
ಧರೆಯೊಳದನಾದರದೊಳವಧರಿಪುದು ಸುಸಮ್ಮತದಿ ೭

——:——

# ಎರಡನೆಯ ಸಂಧಿ

---

ಸೂಚನೆ

ವ್ಯಾಸಮುನಿಪತಿಗೊರೆದ ಬೃಂದಾ
ವಾಸದೊಳು ಹರಿಯಿರ್ದ ಕಥನವ
ವಾಸವಾರಿ ಜಲಂಧರನು ಜನಿಸಿದುದ ವಿಧಿಸೂನು

ಶ್ರೀಮನೋಹರನಪ್ರತಿಮಗುಣ
ಧಾಮನೆನಿಪಾ ವ್ಯಾಸಮುನಿಪತಿ
ತಾಮಸವ ಪರಿಹರಿಪ ಪೌರಾಣಗಳ ತಾ ಸೃಜಿಸಿ
ಆ ಮಹಾವನ ಬದರಿಕಾಶ್ರಮ
ಸೀಮೆಯೊಳು ಗುರುತಪದೊಳಿಸೆದಿರೆ
ತಾಮರಸಭವಸೂನು ಬಂದ ಸನತ್ಕುಮಾರಮುನಿ ೧

ಬಂದ ಮುನಿಗರ್ಘ್ಯಾದಿ ಸತ್ಕೃತಿ
ಯಿಂದಲುಪಚರಿಸುತ್ತ ಕುಶಲವ
ನಂದು ಮುದದಿಂ ಕೇಳುತಾಗಮನದ ಸುಸಂಗತಿಯ
ಚಂದದಿಂ ಬೆಸಗೊಳಲು ಸನ್ಮುನಿ
ವೃಂದವಂದಿತಗೆಂದನಾ ಹರಿ
ನಂದನನ ಸಭೆಯಿಂದ ಕಾಶಿಯೊಳುರು ಮಹಾವ್ರತವ ೨

ಚರಿಸಬೇಕೆಂಬಾಸೆ ಮನದೊಳು
ಬರಲು ಪಥದೊಳು ತವಪದಾಬ್ಜದ
ದರುಶನವು ಪರಿಲಭ್ಯವಾದುದು ಧನ್ಯ ತಾನೆನುತ
ಸರಸಿಜಾಸನಸೂನು ನುಡಿಯಲು
ಪರಮಹರುಷದಿ ಸತ್ಯವತಿಯಾ
ವರಕುವರ ಬೆಸಗೊಂಡನಾ ವ್ರತವಾವುದೆಂದೆನುತ ೩

ವ್ಯಾಸಮುನಿಪತಿ ಕೇಳು ಚಾತು
ರ್ಮಾಸದಲಿ ಬೃಂದಾವನಾಂತದೆ
ವಾಸಗೈವನು ತುಲಸಿದೇವಿಯ ಸಹಿತ ಹರಿ ಮುದದಿ
ವಾಸವಾದಿಸಮಸ್ತಸುರರಾ
ವಾಸುದೇವನನಂದು ಸೇವಿಪ
ರಾ ಶುಭೋದಯ ಸಮಯವದಕಿಂತಧಿಕವಿಲ್ಲೆಂದ ೪

ತುಲಸಿ ಎಂಬವಳಾರು ಮೇಣಾ
ಕಲುಷದೂರನದೇಕೆ ಬೃಂದಾ
ನಿಲಯದೊಳು ವಾಸಿಪನು ಚಾತುರ್ಮಾಸದಲಿ ಮುದದಿ
ತಿಳುಹು ನೀನಾ ವಿವರವೆಲ್ಲವ
ನೊಲಿದು ವಿಸ್ತರಮಾಗಿಯೆನಲಾ
ಜಲಜಗರ್ಭನ ಸೂನು ಮುನಿಪತಿಗೊರೆದನೀತೆರದಿ ೫

ಪರಮಮುನಿ ಕೇಳ್ರಜತಗಿರಿಯೊಳು
ಪುರಹರನು ಕಡು ತೋಷದಿಂದಲಿ
ಗಿರಿಜೆ ಷಣ್ಮುಖ ಗಣಪರಿಂದೊಡಗೂಡಿ ವಿಹರಿಸುತ
ನಿರುತ ಭಕ್ತಿಯೊಳರ್ಚಿಸುವ ಭ-
ಕ್ತರ ಮನೋಭೀಷ್ಟವನು ಸಲಿಸುತ
ಕರುಣೆಯಿಂ ಸಲಹುತಹನಾ ಹಿಮಗಿರಿಯ ಮನೆಮಾಡಿ ೬

ಗಿರಿಯು ಸಂಪದವೆನಿತೊ ಮನಸಿಜ
ಹರನ ಮಂದಿರವೆನಿಸೆ ಫಲಮಯ
ತರುಗಳಿಂದ ಗಭೀರಕಂದರನಿರ್ಝರಗಳಿಂದೆ
ನೆರೆ ಮಧುರಗಂಧರ್ವಗಾನವ
ಜರೆಯುವಂತಿಂಚರದೆ ಪಾಡುವ
ವರವಿಹಗತತಿಯಿಂದೆ ಮಿಗೆ ಶೋಭಿಸಿದುದಾಗಿರಿಯು ೭

ಸೊಗವ ಬೀರುವ ಶೃಂಗವೃಂದದಿ
ಜಗದ ಸೌಧಕೆ ನೆಲೆಯ ಕಂಬದ
ಬಗೆಯ ತೋರುತ ಸದನವೆನಿಸಿತು ಭಕ್ತಪಾಲನಿಗೆ
ಗಗನವನು ಸೋಂಕುತಿಹ ಶಿಖರದಿ
ಮುಗಿಲ ತಡೆಯುತ ತರಣಿ ಶಶಿಗಳ
ಬಿಗಿದು ತಾಂ ಚುಂಬಿಸುವ ತೆರದಿಂ ಮೆರೆದುದಾಗಿರಿಯು ೮

ವರನಿಶಾಕರ ತಿಲಕವಾಗಿರೆ
ಸುರಿವ ಹಿಮ ಬೆಳ್ವಸನವೆನಿಸಿರೆ
ಮರುತನಿಂ ಸಂಚಲಿಪ ಮೇಘವೆ ಕೇಶವೆಂದೆನಿಸೆ
ತರುಗಳೇ ಪಸಿರುಡಿಗೆಯಾಗಿರ
ಲುರುಕಿರೀಟವೆ ಶಿಖರಮುಡುಗಣ
ಮೆರೆದ ಸರ್ಪಾಭರಣವೆನಿಸಿರೆ ರಾಜಿಸಿತು ಗಿರಿಯು ೯

ಇಂದುಧರನೋಲಗದೊಳೊಪ್ಪಿರೆ
ನಂದಿ ಭೃಂಗಿ ಗಣಂಗಳೆಲ್ಲರು
ನಿಂದು ನುತಿಮಾಡಿದರು ಹರುಷದಿ ನಿಗಮಗೋಚರನ
ಕಂದುಗೊರಲನೆ ಪರಮಕರುಣಾ
ಸಿಂಧು ಕಾಮಿತದಾತ ಶಿವನೆ ಮು
ಕುಂದವರದನೆ ಸಲಹೆನುತ ನಮಿಸಿದರು ಭಕ್ತಿಯಲಿ ೧೦

ಈಶನಿಂತೋಲಗದ ದಿವ್ಯಮ-
ಹಾಸಭೆಯ ಮಧ್ಯದಲಿ ಮೆರೆದಿರೆ
ವಾಸವನು ನಡೆತಂದು ಮಣಿಯುತೆ ಬೆಡಗಿನಿಂ ನಿಂದು
ಬೇಸರವು ಪಿರಿದಾಯ್ತು ಯುದ್ಧದೊ
ಳಾಸೆ ಕೈವಿಾರಿರ್ಪುದಂಬರ
ಕೇಶ ಸಮಬಲನಿಲ್ಲ ತೋಳ್ಗಳಿಗಿಲ್ಲ ಸಾರ್ಥಕತೆ ೧೧

ನಂದಿವಾಹನ ನಿಖಿಲಮುನಿಹೃ-
ನ್ಮಂದಿರನೆ ವರರುಂಡಮಾಲನೆ
ಕಂದಮಾರ್ಕಂಡೇಯವರದನೆ ಭಸಿತಲೇಪಿತನೆ
ಇಂದುಶೇಖರ ಸುರನದೀಧರ
ಮಂದಮತಿಯೆಂದೆನ್ನ ವಾಕ್ಯವ
ಹಿಂದುಗಳೆಯದೆ ಹಗೆಯ ಪೊರಕಿಸು ಕಳೆವೆ ಬೇಸರವ ೧೨

ಹರಿದು ಪುತ್ತದೊಳಿರ್ದ ಫಣಿಯಂ
ಕೆರಳಿಸುತೆ ಸೆಳೆವಂತೆ ವೈರಿಯ
ನೆರೆವ ಸುರಪಂಗೆಂದನಭವನು ಮರುಳೆ ನೀನಿಂದು
ಮರೆದೆಯಾ ರಕ್ಕಸರ ಸವಿಯನು
ಮರಳಿ ಬೇಡುವೆ ಹಗೆಯನೆಂದಾ
ಹರನು ಭರದೊಳು ಮುಳಿದು ತೆರೆದನು ಫಾಲನೇತ್ರವನು ೧೩

ಪೇಳಲಳವೇ ಫಾಲನಯನ
ಜ್ವಾಲೆ ಪಸರಿಸಲೊರಗಿದನು ಸುರ
ಪಾಲಕನು ನೋಡಿದನು ವಾಕ್ಪತಿ ನಡೆದನರ್ಥವನು
ಕೇಳಿಕೊಂಡನೆ ಹಗೆಯನಸುವನು
ಕಾಲರುದ್ರನ ಕೋಪದಗ್ನಿಗೆ
ಪೋಲು ಮಾಡಿದನೆನುತ ಮರುಗಿದನಮರಗುರುವರ್ಯ ೧೪

ದೇವ ನಿನ್ನಯ ಖತಿಯ ಬೇಗೆಯ
ನೀವಿಬುಧಪತಿ ಸಹಿಸಬಲ್ಲನೆ
ಜೀವದಾನವನೊಲಿದು ಕರುಣಿಸು ಶಾಂತನಾಗೆನುತ
ದೇವಗುರು ತಾ ಭಯದಿ ನುತಿಸುತ
ಭಾವಶುದ್ಧಿಯೊಳೆರಗಿ ಬೇಡಲು
ಸಾವಧಾನದಿ ನುಡಿದನಾ ಪುರಹರನು ಗೀಷ್ಪತಿಗೆ ೧೪

ಹಿಂದೆ ದಾನವರೆಸಗಿದುಪಟಳ
ವೊಂದೆ ಸಾಲದೆ ದೇವತತಿಗಿ
ನ್ನೊಂದು ಬಾರಿಯು ಬಯಸುವರೆ ನೀತಿಜ್ಞರಾದವರು
ಮುಂದೆ ಬಹ ಕಷ್ಟಂಗಳಂ ಕಡು
ಮಂದಮತಿಯರಿದಪನೆ ಕೇಳಿದ
ರಂದವನು ವಾಸವನು ಬೇಡಿದನೊರ್ವ ವೈರಿಯನು ೧೫

ಮಂದಮತಿಯಾಗಿಹನು ಸುರಪತಿ
ಹಿಂದೆ ಸಂಭವಿಸಿರ್ದ ರಕ್ಕಸ
ವೃಂದವನು ಕೊಲಲಾರದೊದಗಿದ ಗಾಢದುಃಖದಲಿ
ನೊಂದನಂತಿರಲಿಂದು ಶಾಂತಿಯ
ನೊಂದಿ ಬಾಳದೆ ಹಗೆಯ ಬಯಸಲು
ಬಂಧನವ ತಾ ದೇವನಿಕರಕೆ ತಾರದಿರನೆಂದ ೧೬

ಸುರಪತಿಯ ಸಾತ್ವಿಕತೆ ನಶಿಸಿಹು
ದಿರಲಿ ಕೇಳ್ನೀನಳುಕಲೇತಕೆ
ಸುರರ ಗೆಲ್ಲುವ ದೈತ್ಯನೋರ್ವನು ಜನುಮುವೆತ್ತುವನು
ಬರಿದೆ ಚಿಂತಿಸಲೇನು ಫಲ ನಾಂ
ಕರುಣಿಸಿದೆ ವೈರಿಯನೆನುತಲಾ
ಪುರಹರನು ಪೇಳಲ್ಕೆ ಸುರಗುರು ನಮಿಸುತಿಂತೆಂದ ೧೭

ಇಂದುಶೇಖರ ಕರುಣೆಯಿಂದೆಪು-
ರಂದರನ ಪೊರೆ ಕೋಪಿಸದೆ ಗುಣ
ವೃಂದ ಜಗದಾನಂದ ತ್ರಿಭುವನವಂದ್ಯ ನೀನೊಲಿದು
ತಂದೆ ತಾ ಮತಿಹೀನನಾಗಿಹ
ನಂದನನ ತೊರೆದಪನೆ ನೀನೌ
ತಂದೆ ಸುರರಿಗೆನುತ್ತಲಾ ಗುರು ನುತಿಸಿದನು ಹರನ ೧೯

ಧರಣಿಯನು ಸೃಷ್ಟಿಸುವೆ ನೀ ಪಂ-
ಕರುಹಭವನೆಂದೆನಿಸಿ ಜಗವನು
ಪೊರೆವೆ ಹರಿಯೆಂದೆನಿಸಿ ಮೋಕ್ಷ ಲಯಗೊಳಿಪೆ ಹರನಾಗಿ
ಮೆರೆವ ರವಿಯೆಂದೆನಿಪೆ ದಿವದೊಳ
ಗಿರುಳೊಳಗೆ ಶಶಿಯೆನಿಸಿ ಶೋಭಿಪೆ
ಹರನೆ ಪನ್ನಗಧರನೆ ನೀಂ ಸುರಪತಿಯ ಪೊರೆಯೆಂದ ೨೦

ನಿಂದು ದೃಢದೊಳಗಿಂತು ವರಬಾ
ಲೇಂದುಮೌಳಿಯ ನುತಿಸುತಿರೆ ಬಹು
ದಂದುಗವ ಪರಿಹರಿಸಿ ರಕ್ಷಿಸ ಪರಮಕರುಣಾಳು
ಮಂದಹಾಸವ ಬೀರುತಲಿ ಸಾ-
ನಂದದಿಂ ಗೀಷ್ಪತಿಗೆ ಶಾಂತತೆ
ಯಿಂದ ನುಡಿದನು ವದನದೀಧಿತಿ ಬೆಳಗೆ ದಿಕ್ತಟವ ೨೧

ಕೇಳು ವಾಕ್ಪತಿ ದುಗುಡ ಬರೆಸು ವಿ-
ಶಾಲಭಾವದಿ ಸಹಿಸಬೇಹುದು
ಪೇಳಿದಾನುಡಿ ವಿಫಲವಾಗದು ಮುಂದುದಿಪ ಹಗೆಯ
ಕಾಳಗದಿ ಸಂಹರಿಸಿ ನಿಮ್ಮನು
ಪಾಲಿಸುವೆ ಚಿಂತಿಸದೆ ಶಾಂತಿಯ
ತಾಳು ನೀನೆಂದೆನುತ ಮಹಿಮಾರ್ಣವನು ತಾ ನುಡಿಯೆ ೨೨

ಬಳಿಕಲಾ ಕರುಣಾಳು ಪರಶಿವ
ನೊಲವಿನಿಂ ವಾಸವನ ನಿಜಕರ
ಜಲಜದೊಳು ವ್ಯೈದಡವೆ ಚೇತನವಾಂತು ಶಂಕರಗೆ
ತಲೆಯ ಬಾಗಿಸಿ ಮಣಿದು ಲಜ್ಜೆಯೊ
ಳಳುಕುತಲಿ ಗುರುಸಹಿತ ತಾ ಕಳ
ವಳದೊಳಮರಾವತಿಗೆ ನಿರ್ಜರನಾಥನೈತಂದ ೨೩

ನೀಲಕಂಠನ ಫಾಲನಯನ
ಜ್ವಾಲೆಯಿಂ ಕಿಡಿಯೊಂದು ಶರಧಿಯ
ಮೇಲೆ ಬೀಳಲದೇನು ಚೋದ್ಯವೊ ನಿಮಿಷಮಾತ್ರದಲಿ
ತಾಳಿ ಶಿಶುರೂಪವನು ಮುಳುಗದೆ
ತೇಲುತಿರ್ದುದು ಪೊಗಳಲಳವೇ
ಕಾಲಭೈರವನುರುತರದ ಲೀಲೆಗಳನವನಿಯಲಿ ೨೪

——:——

# ಮೂರನೆಯ ಸಂಧಿ

---

**ಸೂಚನೆ**

**ಜ**ಲಧಿಗೈದಿದ ಕಾಲನೇಮಿಯು
ಚೆಲುವ ಶಿಶುವನು ತಂದು ಪೋಷಿಸೆ
ಕಲಿ ಜಲಂಧರನೆನಿಸಿ ಜೈಸಿದ ಸಕಲ ಭೂಭುಜರ

ಒರೆವೆ ಮುಂದಣ ಕಥೆಯ ನೀನವ
ಧರಿಸು ಪೂರ್ವದಿ ಮಗಧ ದೇಶವ
ನುರು ಪರಾಕ್ರಮಿ ಕಾಲನೇಮಿಯು ದೈತ್ಯಕುಲಭವನು
ಪೊರೆವನತಿಧರ್ಮದೊಳು ತಾ ನಿ-
ರ್ಜರರಿಗಹಿತವನಾಚರಿಸದೆಯೆ
ಮೆರೆವನಸುರಾನ್ವಯಕೆ ಭೂಷಣನೆನಿಸಿ ವಿಭವದಲಿ ೧

ಕಾಲನೇಮಿಯ ವೈಭವಕ್ಕೀ
ರೇಳು ಲೋಕದೊಳಿಲ್ಲ ಸರಿಯನು
ಕೂಲೆಯಾಗಿಹ ಸತಿ ಸುಮಂತ್ರಿ ವಿಧೇಯಪರಿವಾರ
ಕೋಳಬಲಕಿದಿರಿಲ್ಲ ಪ್ರಜೆಗಳು
ಶೀಲವಂತರು ಧರ್ಮಯುತರವ
ನಾಳುವಿಕೆಗಚ್ಚರಿಯ ಪಡುತಿಹರುಳಿದ ಭೂಭುಜರು ೨

ಕೊರತೆಯೆಂಬುದ ಕನಸಿನೊಳು ತಾ
ವರಿಯದೆಯೆ ಸೌಭಾಗ್ಯಸುಖದಿಂ
ದಿರಲು ದಿನಗಳೆದಂತೆ ಮೂಡಿತು ಚಿಂತೆ ಚಿತ್ತದಲಿ
ಧರೆಯೊಳಾರೆನ್ನಂತೆ ನಿರ್ಭಾ
ಗ್ಯರು ಮಹಾದೇವೆನುತ ಸಂತತ
ಮರುಗುವಳು ನೃಪನರಸಿ ತಾ ಸಂತಾನಹೀನತೆಗೆ ೩

ಪಿಂತೆ ಮಾಡಿದ ಕರ್ಮಫಲ ತಾ
ನಿಂತಿರಲು ಬಯಲಾಸೆಯಿಂದಲಿ
ಸಂತತಿಯ ಬಯಸಿದೊಡೆ ಬರ್ಪುದೆ ಯೆನುತಲನುದಿನವು
ಚಿಂತಿಸುತಲಿಹ ಸತಿಯ ಬೇಸರ
ವಂ ತೊಡೆಯಲವನಿಪ ವಿಹಾರಕೆ
ಕಾಂತೆ ಪರಿಜನವೆರಸುತೈದಿದನಂಬುಧಿಯ ತಡಿಗೆ ೪

ಧರಣಿಯೆಲ್ಲವ ಬಳಸಿ ನಿಂದಿಹ
ಶರಧಿಯನು ನೆರೆ ನಿರ್ಮಿಸಲ್ಕಾ
ಸರಸಿಜೋದ್ಭವನೇಸು ಚತುರನೊ ಶಿವ ಮಹಾದೇವ
ಹರಿಯು ಮಲಗುವನೆಂದು ಮೋಣಾ
ಸಿರಿಯು ಜನಿಸಿಹಳೆಂದನರ್ಘ್ಯದ
ವರರತುನಮಿಹುದೆಂದು ಗರಿಮೆಯ ಮೆರೆದುದಂಬುಧಿಯು ೫

ಪೊಳೆವ ರವಿಕಿರಣಗಳು ಠಂಜಿಸೆ
ಸುಳಿಯುಮುಲ್ಕಾಪಾತದಂತಿರ
ಲಲೆಯು ಜಂಝಾಮಾರುತನ ಪರಿಯಾಗಿ ಶೋಭಿಸಲು
ಸಲೆ ಸುರತ್ನದ ಶಕಲದಂತಿಹ
ಪುಳಿನರಾಶಿಯು ಭಗಣಮೊಂದೆನೆ
ಚಲುವದೇಂ ಬೀರಿದುದೊ ಗಗನಕೆ ನೆರೆಯ ಗಗನಮೆನೆ ೬

ಆ ಗಭೀರಸಮುದ್ರಮಧ್ಯದೊ
ಳಾಗ ತೇಲುತೆ ಶಿಶುವು ನಗುತಲಿ
ಬೇಗ ಸಾಗುತ್ತಿರ್ದುದಲೆಗಳ ರಭಸದಿಂ ದಡಕೆ
ತೂಗಿ ಪಾಡುವ ಜನನಿಯಿಂದಾ
ನೀಗಲಗಲಿದೆ ಸಲಹಿರೆನ್ನುತ
ಕೂಗುತರಸನ ಕರೆವ ಮಾಳ್ಕೆಯೊಳಿದ್ದುದಾ ಶಿಶುವು ೭

ನೋಡಿ ಸ್ವೈರೆರಗಾಗಿ ತವಕದೊ
ಳೋಡಿ ಬಂದಾ ಹಸುಳೆಯನು ಕೈ
ನೀಡಿ ಜಲದಿಂದೆತ್ತಿ ಮುಂಜೆರಗಿಂದೆ ಮೈಯೊರಸಿ
ರೂಢಿಗಚ್ಚರಿ ಶಿಶುವನಿದನೀಂ
ನೋಡೆನುತ ವಲ್ಲಭೆಯ ಕರದೊಳು
ಗಾಢ ಹರುಷದೊಳಿಟ್ಟನಾ ದಾನವಮಹೀಶ್ವರನು ೮

ಆವಜನ್ಮದ ಸುಕೃತಫಲವೋ
ಭಾವಜಾಂತಕನೀಕ್ಷಿಸಿರ್ಪ ಕೃ–
ಪಾವಲೋಕನಫಲವೊ ಮೇಣ್ ಸಿರಿಯರ ತಪಃಫಲವೊ
ಭಾವಿಸಲ್ಕರಿದಿದರ ಮರ್ಮವ
ದೇವದೇವನೆ ಬಲ್ಲನೆಂದೆನು
ತಾ ವನಿತೆ ಪುತ್ರವತಿಯಾದೆನೆನುತ್ತ ಹಿಗ್ಗಿದಳು ೯

ಬಡತನದಿ ಬಳಲಿದಗೆ ಧಾರಿಣಿ
ಯೊಡೆತನವು ಬಂದಂತೆ ಬಲು ನೀ–
ರಡಿಸಿದಾ ಪಂಗುವಿನ ಸನಿಹಕೆ ಗಂಗೆ ಬಂದಂತೆ
ಪೊಡವಿಯೊಳ್ಸುತಹೀನರಾವೆ
ದಡಿಗಡಿಗೆ ಹಂಬಲಿಸುವರಿಗೀ
ಕಡು ಚೆಲುವ ಶಿಶು ದೊರೆಯಲವರಾನಂದಕೆಣೆಯುಂಟೆ ೧೦

ಶರಧಿಯೊಳು ಶಿಶುವಿಹುದೆ ಕರುಣಾ
ಶರಧಿ ದೇವನ ಚಿತ್ರಮಿದು ಮೇಣ್
ಶರಧಿ ತಾನಿದಕೊಳ್ಳದಿತ್ತನೆನುತ್ತ ಸಮ್ಮುದದ
ಶರಧಿಯೊಳಗೋಲಾಡುತಲಿ ಪಿಂ
ದಿರುಗಿದರು ಪರಿಜನದೊಡನೆ ನಿಜ
ಪುರವರಕೆ ದಂಪತಿಗಳಾ ಶಿಶುಸಹಿತ ಸಂಭ್ರಮದಿ ೧೧

ಪಸರಿಸಿದುದೀವಾರ್ತೆ ಪುರದೊಳು
ವಸುಮತೀಶಗೆ ಜಯವೆನುತ ವಂ
ದಿಸುತ ತಾ ಬಂದಿದಿರುಗೊಂಡುದು ಸಕಲಪರಿವಾರ
ಎಸೆಯೆ ವಾದ್ಯಗಳಾರತಿಯ ತಹ
ಬಿಸಜಮುಖಿಯರ ಗಡಣದಲಿ ಸಂ–
ತಸದಿ ಶಿಶುಸಹಿತೈದಿದರು ದಂಪತಿಗಳರಮನೆಗೆ ೧೨

ತತ್ಸಮಯದೊಳ್ಪುರದಿ ವಿಭವದೊ
ಳುತ್ಸವಾದಿಗಳನು ನೆಗಳ್ಚಿದ
ರುತ್ಸುಕದಿ ಪರಿಜನರು ಪುರಜನವೆರಸಿ ತೋಷದಲಿ
ಸತ್ಸಚಿವಸಾಮಂತರೊಡನಾ
ತತ್ಸಭೆಯೊಳವನೀಶನಿರೆ ಗುಣ
ವತ್ಸಲ ಮಹಾಮಹಿಮ ನಾರದಮುನಿಪನೈತಂದ ೧೩

ಕಂಡು ಪೀಠವನಿಳಿದು ಮುನಿಪದ
ಪುಂಡರೀಕಕ್ಕೆರಗಿದನು ಭೂ–
ಮಂಡಲಾಧಿಪ ಕಾಲನೇಮಿಯು ಸತ್ಕರಿಸಿ ಬಳಿಕ
ಚಂಡತೇಜದೊಳೆಸೆವ ಶಿಶುವನು
ಕೊಂಡು ಬಂದಾ ಮುನಿಯ ಕೈಯೊಳ
ಖಂಡಹರುಷದೊಳಿತ್ತು ಬಿನ್ನಹಗೈದನಿಂತೆಂದು ೧೪

ಸುರಮುನಿಯೆ ನಿನ್ನಂತೆ ಸರ್ವ
ಜ್ಞರು ಧರೆಯೊಳಿಲ್ಲನಗೆ ನೀನೊಲಿ
ದರುಹಬೇಹುದಿದಾರ ಶಿಶುವಿದನೆನ್ನ ಸುತನಂತೆ
ಪೊರೆಯೆ ಮುಂದಿದರಿಂದೆ ವಂಶಕೆ
ಪಿರಿದು ಲೇಸಾದಪುದೊ ಮೇಣಂ
ತರದೆ ಹಾನಿಯೊ ನಿಜವ ನೀಂ ಮರೆಮಾಜದುಸಿರೆಂದ ೧೫

ಇಂತು ನಾರದಮುನಿಯ ಕಾತರ
ದಿಂ ತವಕಿಸುತ ನೃಪತಿ ಬೆಸಗೊಳೆ
ಸಾಂತ್ವವಚನದೊಳೆಂದನಾ ಹಸುಳೆಯನು ದಿಟ್ಟಿಸುತ
ಚಿಂತಿಸದಿರವನೀಶ ಕೇಳ್ನಿ
ನ್ನಂತೆ ಸುಕೃತಿಗಳಾರು ಶಿಶುವಿದ
ನಂತಕಾಂತಕನಿತ್ತಿಹನು ನಿನಗೊಲಿದು ಕೃಪೆಯಿಂದ ೧೬

ಸಿಂಧುವಿನ ವರಪುತ್ರನಿವಗೆ ಜ–
ಲಂಧರನೆನುತ ಪೆಸರನಿಡು ಮೇಣ್
ಕುಂದುಕೊರತೆಗಳಾಗದಿದು ಸಾಮಾನ್ಯ ಶಿಶುವಲ್ಲ
ಮುಂದಿವನು ತನ್ನುರು ಪರಾಕ್ರಮ
ದಿಂದೆ ಸರ್ವರ ಜೈಸಿ ವೈಭವ
ದಿಂದೆ ತಾನಾಳ್ವನು ಮಹಾಸತಿಯೆನಿಪಳಿವನರಸಿ ೧೭

ಮುನ್ನ ನೀನೆಸಗಿರ್ಪ ಸುಕೃತವೆ
ಕನ್ನಿಕೆಯ ರೂಪೆಂಬ ಪೋಲು
ತ್ಪನ್ನವಹುದೊಂದಮಲ ಪೆಣ್‌ಶಿಶು ವರುಷವೇಳರಲಿ
ನಿನ್ನ ವಲ್ಲಭೆಯುದರದೊಳಗಾ
ಸನ್ನುತೆಯೆ ಮುಂದಿವನ ವಧುವಹ
ಳಿನ್ನು ಸಲಹೀಶಿಶುವನೆನುತಲಿ ಹರಸಿ ಹೊರವಂಟ ೧೮

ಮುನಿಪನನುಮತದಿಂದೆ ಪಸುಳೆಯ
ನನುಪಮಪ್ರೇಮದಲಿ ಸಲಹುತ
ಲನುದಿನವು ಸಂತಸದೆ ನಲಿವರು ಬಾಲಲೀಲೆಗಳ
ತನುಮರೆದು ನೋಡುವರು ಹರ್ಷಿತ
ಮನದೆ ಮುದ್ದಾಡುವರು ತನ್ಮಯ
ಘನತರದ ಪುಣ್ಯವನು ದಂಪತಿ ಮೆಚ್ಚಿ ಕೊಂಡಾಡಿ ೧೯

ಕಳೆದವಿಂತೇಳಬುದವಾ ಮುನಿ
ತಿಲಕನರುಹಿರ್ದಂತೆ ಭೂಪನ
ಲಲನೆ ಗರ್ಭವ ತಳೆದು ನವಮಾಸಗಳು ಕಳೆಯಲ್ಕೆ
ಚಲುವ ಪೆಣ್ಶಿಶುವನು ಪಡೆಯೆ ವರ
ಜಲಜಗರ್ಭನ ಜಾಣ್ಮೆಗಿದು ತಾ
ನೆಲೆಯ ಸೌಂದರ್ಯಾತಿಶಯವೆಂಬವೊಲು ರಂಜಿಸಿತು ೨೦

ಕೇಳಿದನು ಶಿಶುಜನನವಾರ್ತೆಯ
ಕಾಲನೇಮಿಯು ಮನದೆ ಹರ್ಷವ
ತಾಳುತಂದಿನ ರಾಜಕಾರ್ಯವ ಮಾಣುತೋಲಗವ
ಬೀಳುಗೊಟ್ಟೈತರಲು ಸತಿಯುರು
ತಾಳುತತಿ ಸಂಭ್ರಮವ ತೋರಿದ
ರಾ ಲಲಿತಮಾಗಿರ್ದ ಶಿಶುವನು ತಂದು ಭೂವರಗೆ ೨೧

ದಶದಿನಂಗಳು ಕಳೆಯೆ ಭೂವರ
ನಸುರಬೃಂದದೊಳಾಗಮಿಗೆ ಶೋ-
ಭಿಸುವ ಕುವರಿಗೆ ಬೃಂದೆಯೆನುತಲಿ ನಾಮಕರಣವನು
ಎಸಗಿ ಭೂಸುರನಿವಹ ನೆರೆ ಸಂ-
ತಸದಿ ತಣಿವಂತೊಲಿದು ಬಹುವಿಧ
ವಸನಮಣಿಭೂಷಣಗಳಿತ್ತನು ವಿಪುಲಸಂಭ್ರಮದೆ ೨೨

ಬಳಿಕ ಗುರುಮುಖದಿಂದೆ ವಿದ್ಯೆಯ
ಕಲಿಸುತುಪನಯನವನು ಬಾಲನಿ
ಗೊಲವಿನಿಂ ತಾನೆಸಗಿ ಶರವಿದ್ಯೆಗಳ ನೀತಿಯನು
ತಿಳುಹಿ ನೃಪಧರ್ಮವನು ನೀತಿಯ
ನೆಲೆಯನರುಹೆ ವಿನೀತಭಾವವ
ತಳೆದು ಪರಿಣತನಾಗಿ ಮೆರೆದನು ಕಲಿಜಲಂಧರನು ೨೩

ಶರದ ಸಮಯವು ಬರಲು ಯೌವನ
ಭರದ ಬಿಗುಹಿನ ಮದದಿ ಬಂದಾ
ಧರಣಿಪಗೆ ವಂದಿಸುತ ನುಡಿದನು ಕಲಿಜಲಂಧರನು
ನರಪತಿಗಳಾ ಜೈತ್ರಯಾತ್ರೆಗೆ
ಪೊರಡಲೀಗ ಸಕಾಲವೆನ್ನನು
ಹರಸುತನುಮತಿಯಿತ್ತು ಮುದದಿಂ ಕಳುಹಬೇಕೆಂದ ೨೪

ಲೇಸನಾಡಿದೆಯೆನ್ನ ಮನವತಿ
ತೋಷವಾಂತುದು ವೀರ ಕೇಳ್ ಭೂ–
ಮೀಶರನು ನೀಂ ಗೆಲಿದು ಕಾಣಿಕೆಕಪ್ಪಗಳ ಕೊಂಡು
ಈಸುಧರ್ಮಾವತಿಗೆ ಕಳುಹಿಸು
ಘಾಸಿಪಡದಿರು ರಣದೊಳೆಂದವ
ನೀಶ ಹರಸಿದನಮಲನೇಹದೊಳಾ ಜಲಂಧರನ ೨೫

ಬಳಿಕ ಭೂಮಿಪ ನಾಣತಿಯ ಶಿರ
ದೊಳಗೆ ಧರಿಸುತ ಸೇನೆ ಸಹಿತಾ
ಕಲಿ ಜಲಂಧರ ಸಾರಿದನು ದಿಗ್ವಿಜಯಕನುವಾಗಿ
ಕೊಳುಗುಳವ ಕೈಗೊಂಬೆನೆಂಬುವ
ಬಲಿದ ಮನದುದ್ರೇಕದಿಂದಲಿ
ಬೆಳಸಿದನು ಪಯಣವನು ಮಾಳವ ದೇಶವನು ಕುರಿತು ೨೬

ಆ ನಗರಿಗರಸೆನಿಸಿಹನು ಸು-
ಜ್ಞಾನಿಯೆಂಬಭಿಧಾನದಿಂದಲಿ
ಮಾನಿ ಸತ್ಯಾಚಾರವಿಹಿತನು ಪಾಪವಿರಹಿತನು
ಗಾನನಾಟ್ಯವಿನೋದದಿಂದಾ
ಸ್ಥಾನದೊಳಗಿರೆ ಚರರು ಸಮರಕೆ
ದಾನವನು ಬಂದುದನು ಪೇಳಲು ಸಚಿವಗಿಂತೆಂದ ೨೭

ನೆರಹು ಕಾಲ್ಬಲಗಳನು ಶೀಘ್ರದಿ
ತುರುಗರಾವ್ತರ ಮಾವುತರ ಕರೆ
ಕರೆ ಮಹಾರಥಿಕರನು ರಥವನು ಸಜ್ಜುಗೊಳಿಸೆನುತ
ಅರುಹಿ ತನ್ನಯ ಚಾಪಮಾರ್ಗಣ
ಧರಿಸಿ ವರರಥವೇರಿ ಕೋಪದಿ
ದುರುಳದಾನವ ಬಂದನೇ ಹುಮ್ಮೆನುತಲಿದಿರಾದ ೨೮

ಸಂಧಿಸಿತು ಬಳಿಕೆರಡು ಬಲ ರಣ
ದುಂದುಭಿಯು ಮೊಳಗಿತು ನೃಪಾಲನು
ಕುಂದಣದ ರಥವೇರಿ ಶಸ್ತ್ರಾಸ್ತ್ರಗಳ ಕೈಗೊಂಡು
ಬಂದುದನು ಕಾಣುತ್ತೆ ವೀರ ಜ-
ಲಂಧರನು ರಥವೇರಿ ರೌದ್ರದ
ಲಂದು ನುಡಿದನು ಗರ್ವಿತನ ಭೂಪತಿಯ ಮೊಗನೋಡಿ ೨೯

ಎಲೆ ಮಹೀಶ್ವರ ನಮ್ಮೊಡನೆ ಕೊಳು
ಗುಳಕೆ ನಿಂದಿಹೆ ಛಲದಿ ನಿನ್ನಯ
ಕಲಿತನವು ಸಾಗದು ಕಣಾ ಸಾಂಗ್ರಾಮದೊಳಗೆನ್ನ
ಗೆಲಲು ಕೇಳ್ನಿನಗರಿದು ಸುಮ್ಮನೆ
ತಲೆಯನೀಗದೆ ನಮ್ಮ ಸೇಹವ
ಗಳಿಸಿ ನೀಂ ಸಾಮಂತನಾಗೆನುತೊರೆಯೆ ನೀತಿಯನು ೩೦

ದನುಜನಾಡಿದ ನುಡಿಯ ಕೇಳ್ದಾ
ಜನಪತಿಯು ನಸುನಗುತ ಪೇಳ್ದನು
ಸನುಮತವು ಲೋಕದಲಿ ಕಲಿಗಳು ತಮ್ಮ ಶೌರ್ಯವನು
ಘನತರಾಯುಧದಿಂದಲಲ್ಲದೆ
ಬಿನುಗುನುಡಿಯಲಿ ತೋರರೆನುತೆ
ಚ್ಚನು ಮಹಾಸ್ತ್ರದೊಳಾ ಸುರಾರಿಯ ವಿಪುಲಸೇನೆಯನು ೩೧

ಛಲದೊಳೈತರುತಿರ್ಪ ಸೇನಾ
ಬಲವನೆಲ್ಲವ ಮುರಿದು ಮದಕರಿ
ಗಳ ಸಮೂಹವ ತರಿದು ಮೆದೆಗೆಡಹಿದನು ನಿಮಿಷದಲಿ
ಸೆಳೆವ ರಥವಾಜಿಗಳ ರಥಿಕರ
ತಲೆಗಳನು ಕಡಿಯುತ್ತ ರೌದ್ರದಿ
ಸಲೆಮೊರೆವ ನೃಪನಧಟಿಗುರೆ ಬೆರಗಾದನಮರಾರಿ ೩೨

ಪೊಡವಿಪತಿ ಶೌರ್ಯದಲಿ ತನ್ನಯ
ಪಡೆಯನೆಲ್ಲವನೋರ್ವನೇ ತಾ
ಮಡುಹುತಿರ್ದುದ ಕಂಡು ರೋಷದಿ ಸೆಳೆದು ಕಾರ್ಮುಕವ
ಪಿಡಿದು ಕೂರಂಬುಗಳ ಜೋಡಿಸು
ತೆಡಬಿಡದೆ ಶರವರ್ಷದಿಂ ನೃಪ
ನೊಡಲ ಹೂಳಿದನವನ ಸೇನಾಬಲವ ತಡೆಗಟ್ಟೆ ೩೩

ಧುರದಿ ಕಾದಿದರುಭಯವೀರರು
ಪಿರಿದು ರೋಷದೊಳಿಂತು ಬಳಿಕಾ
ನರಪತಿಯು ಬಳಲಿಹುದ ನೋಡುತೆ ಪರಿಘವನೆ ಕೊಂಡು
ಉರವಣಿಸಿ ಪಲ್ಗಡಿದು ರಭಸದಿ
ಶಿರಕೆ ಪೊಡೆಯಲು ಕಂತುಕದವೋ
ಲಿರದೆ ಪಿಡಿದಿಳೆಗುರುಳಿ ತಾ ಭೂಮಿಪನ ಕಂದರವ ೩೪

ಅಂಗದೇಶಾಧಿಪನ ಗೆಲಿದು ಕ–
ಳಿಂಗದರಸನ ಮದವ ಭಂಗಿಸಿ
ವಂಗದೇಶದ ದೊರೆಯ ನಿಜಸೇನೆಯನು ಖತಿಯಿಂದೆ
ಭಂಗಗೊಳಿಸುತ ನೃಪನನೊರಸುತ
ನಂಗನಗರಿಯು ವಿಭುವ ಗರ್ವವ
ಜಂಗುಳಿಸಿ ಕಾಂಭೋಜದವನೀಶ್ವರನ ಸಂಹರಿಸಿ ೩೫

ಇಂತನೇಕಾವನಿಪರನು ಮಾ
ರಾಂತು ಬಲ್ಪಿಂ ಗೆಲಿದು ತಾ ಸಾ–
ಮಂತರುಗಳಂ ಮಾಡಲದ ಕಂಡುಳಿದ ಭೂವರರು
ಸಾಂತ್ವದಿಂದಿದಿರುಗೊಳಲವರನು
ಸಂತಸದಿ ಮನ್ನಿಸುತ ವಿಭವದಿ
ಪಿಂತಿರುಗಿದನು ನಿಜನಿವಾಸಕೆ ಕಲಿ ಜಲಂಧರನು ೩೬

——:——

# ನಾಲ್ಕನೆ ಸಂಧಿ

---

**ಸೂಚನೆ**

ತರುಣಿ ಬೃಂದಾದೇವಿಯಸು ತಾ
ವರಿಸಿ ಭೂವರನಾಗಿ ದಿವಿಜರ
ಧುರದಿ ಸೋಲಿಸಿ ಕಲಿ ಜಲಂಧರ ಪಡೆದ ಜಯವಧುವ

ಕೇಳು ವೇದವ್ಯಾಸ ಮುನಿಪತಿ
ಕಾಲನೇಮಿಯ ಮನದ ಸಂತಸ
ದೇಳಿಗೆಯನೇನೆಂಬೆನಾತನ ತನುಜೆ ಯೌವನವ
ತಾಳಿ ಲೋಕದೊಳಿಂತೆಸೆವ ನೀ
ಲಾಳಕೆಯರಿಲ್ಲೆಂಬವೊಲು ಗುಣ
ಶೀಲಸೌಂದರ್ಯಾತಿಶಯದಲಿ ಶೋಭಿಸುತ್ತಿರಲು ೧

ಕುಂದಕುಟ್ಮಲರದನಗಳು ಪೂ-
ರ್ಣೇಂದು ಮಂಡಲದಂತೆ ಮುಖವರ
ವಿಂದದಂತೆ ವಿರಾಜಿಸುವ ನೇತ್ರಗಳು ಹಿಮಕರನ
ಚಂದ್ರಿಕೆಯಿದೆಂಬವೊಲು ಸಂತತ
ಮಂದಹಾಸವ ಬೀರುತಿಹ ಸತಿ
ಬೃಂದೆಯಂದವ ಬಣ್ಣಿಪೊಡೆ ಭೋಗಿಪನಿಗರಿದೆಂದ ೨

ಪರರ ಕಷ್ಟವ ಕಂಡು ಮರುಗುವ
ಪರರ ಸುಖದುನ್ನತಿಯ ಬಯಸುವ
ಪರರ ಸುಖಸೌಭಾಗ್ಯಗಳಿಗತಿ ಸಮ್ಮುದವ ತಾ ತಳೆವ
ಪರರ ದೋಷವನೆತ್ತಿ ನುಡಿಯದ
ಪರರ ಸದ್ಗುಣಗಳನು ಪೊಗಳುವ
ಪರಮ ಸುಗುಣಾಂಬುಧಿಯ ಬೃಂದೆಯ ಪೊಗಳಲೆನ್ನಳವೆ ೩

ನಂದನೆಯು ದಿನದಿನಕೆ ಯೌವನ
ದಿಂದೆ ಶೋಭಿಸುತಿರಲು ಕಂಡಾ
ನಂದದಿಂದಲಿ ಕಾಲನೇಮಿಯು ಸಚಿವಗಿಂತೆಂದ
ಹಿಂದೆ ನಾರದಮುನಿಪನೊರೆದಂ
ತಿಂದು ತನುಜೆಯನೀವೆ ವೀರ ಜ–
ಲಂಧರಗೆ ನೀವ್ಸಕಲ ಸನ್ನಾಹವನು ಗೈವುದೆನೆ ೪

ಅರಸನಾಜ್ಞೆಯ ತಳೆದು ಸರ್ವರು
ಪರಮ ಮಂಗಳಕಾರ್ಯದೇಳ್ಗೆಗೆ
ಹರುಷದಿಂದಲಿ ಸಕಲ ಸಂಭಾರವನು ತರಿಸಿದರು
ಕರೆಸಿದರು ಶಿಲ್ಪಿಗಳನಾಗಳೆ
ಪರಿಣಯದ ಮಂಟಪವ ನಿರ್ಮಿಸ
ಲುರುತರದ ಸಂಭ್ರಮದೊಳಿರ್ದುದು ಸಕಲ ಜನನಿಕರ ೫

ಸಚಿವರಾಣತಿಯಾಂತು ಹರ್ಷದಿ
ರಚಿಸತೊಡಗಿದರಗಣಿತಾಮಳ
ರುಚಿರರತ್ನಪ್ರಚಯದಲಿ ವೈವಾಹಮಂಟಪವ
ಖಚರರೆಲ್ಲರು ಮೆಚ್ಚಿ ದೈತ್ಯ ಸಿ–
ಗುಚಿತವೀ ಸೌಭಾಗ್ಯವೆನಲಾ
ಶಚಿಯ ಪತಿಯಾಸ್ಥಾನಕಿಮ್ಮಡಿಯಾಗಿ ರಂಜಿಸಿತು ೬

ಸಲೆಸೊಗದ ಕತ್ತುರಿಯ ಸಾರಣೆ
ತೊಳಗುತಿಹ ಮುತ್ತಿಡಿದ ಕಾರಣೆ
ನಳನಳಿಪ ಕೆಂದಳಿರುತೋರಣ ವೀಧಿವೀಧಿಯಲಿ
ಸುಳಿಯುತ್ತೈತಹ ಪುಷ್ಪಸೌರಭ
ಲಲಿತ ನೂತನಕಾಂತಿಯಿಂ ಮಿಗೆ
ಬೆಳಗುತಿಹ ಮಣಿದೀಪ ಪೆರ್ಚಿಸೆ ನಗರಸಿಂಗರವ ೭

ಕೆಲಬಲದೊಳುಚ್ಚರಿಪ ಮಂತ್ರಾ
ವಳಿಯ ರವ ನಾಲ್ದೆಸೆಯ ತುಂಬಿರೆ
ಸಲೆ ಮನೋಹರ ನೃತ್ಯಗಾಯನ ವೈಭವದೊಳೆಸೆಯೆ
ವೊಳಗೆ ಶುಭವಾದ್ಯಾದಿಗಳು ಮಂ—
ಗಳವ ಪಾಡೆ ಸುವಾಸಿನೀಜನ
ನಲವಿನಿಂದೆ ಜಲಂಧರನು ಬೃಂದೆಯನು ವರಿಸಿದನು ೮

ಕಾಲನೇಮಿ ಮಹೀಶ್ವರನು ಗುಣ
ಶೀಲೆ ಬೃಂದೆಗೆ ಗಾಢಸ್ನೇಹದೊ
ಳಾಲಿಗಳು ನೀರೂರೆ ನುಡಿದನು ಸುತೆಯ ಮೈದಡವಿ
ಲಾಲಿಸಿದ ನೀಂ ಮಗಳೆ ನಿನ್ನಯ
ಪಾಲಕನು ಕೇಳೀ ಜಲಂಧರ
ಪೇಳಿದರ್ಥವ ನಡೆಸಿ ಪತಿಗನುಕೂಲೆಯೆಂದೆನಿಸು ೯

ಪತಿಯ ಖತಿಗೆಡೆಗುಡದೆ ಮಾತಿಗೆ
ಪ್ರತಿಯನಾಡದಿರಮ್ಮ ಸೇವಕ
ತತಿಯ ಕೃಪೆಯಿಂ ಸಲಹು ಸರ್ವರ ಹಿತವನಾಚರಿಸು
ಸತತ ಸಿರಿಶಾಶ್ವತವದೆಂಬುದ
ಮತಿಯುತೆಯೆ ನೀಂ ಮರೆದು ಲೋಕದಿ
ಸತಿಶಿರೋಮಣಿಯೆನಿಸಿ ಬಾಳೆಂದೆನುತ ಹರಸಿದನು ೧೦

ಪರಮ ವೈಭವದಿಂ ವಿವಾಹವ
ವಿರಚಿಸುತೆ ಮುದದಿಂದೆ ರಾಜ್ಯವ
ವರ ಜಲಂಧರಗಿತ್ತು ನೀತಿಯನರುಹಿ ತಪಕಾಗಿ
ತೆರಳೆ ಸತಿಸಹಿತಡವಿಗಿತ್ತಲು
ವರ ಜಲಂಧರ ನೃಪತಿಯೆನಿಸುತೆ
ಪಿರಿದು ಮಮತೆಯೊಳಾಳುತಿರ್ದನು ನೀತಿಯುತನಾಗಿ ೧೧

ಬೃಂದೆಯೊಡನತಿಮುದದಿ ವೀರ ಜ-
ಲಂಧರನು ಸಾಮ್ರಾಜ್ಯವೈಭವ
ದಿಂದೆ ಮೆರೆಯುತ ತನ್ನ ಪ್ರಜೆ ಪರಿವಾರವೆಲ್ಲವನು
ತಂದೆಯಂದದಿ ಪಾಲಿಸುತಿರೆ ಮು-
ಕುಂದಭಕ್ತನು ನಾರದನು ತಾ
ಬಂದನಲ್ಲಿಗೆ ಹರಿಯನಾಮಂಗಳನು ನುತಿಸುತಲಿ ೧೨

ಮುನಿಪನಾಗಮನವನು ಕಾಣುತೆ
ದನುಜಪತಿ ನಡೆತಂದು ಪದಯುಗ
ಕನುನಯದಿ ಪೊಡಮಟ್ಟು ಮಧುಪರ್ಕಾದಿಗಳ ಸಲಿಸೆ
ಮನದಿ ಸಂತಸಗೊಂಡು ಶೌರಿಯ
ನೆನೆಯುತಿರೆ ಗರ್ವದಲಿ ತನ್ನಯ
ಘನತರದ ವೈಭವದರೀತಿಯ ಪೊಗಳುತಿಂತೆಂದ ೧೩

ಎಲೆ ಮುನೀಶ್ವರ ನೀನು ಮೂಜಗ
ವಲೆದು ಸರ್ವವನರಿವೆ ನೃಪಗೃಹ
ಗಳನು ನೋಡಿಹೆಯೆನ್ನಸಿರಿಗೆಣೆಯಾದ ಭೂಪತಿಯು
ಇಳೆಯೊಳಿರ್ಪನೆ ಹೇಳು ತನ್ನನು
ಗೆಲುವ ಸಾಹಸಿಯಿಹನೆ ನೋಡೀ
ನಿಳಯದಂತಿಹ ನಿಲಯಮುಂಟೇ ಮೂಜದುಸಿರೆಂದ ೧೪

ನೆರೆವಿರಾಜಿಪ ಸ್ವರ್ಣಭಿತ್ತಿಯ
ಮರಕತದನೆಲೆಗಟ್ಟುಗಳ ಗೋ-
ಪುರವ ಪ್ರಾಕಾರಗಳ ಕ್ರೀಡಾವನಸರೋವರವ
ಕರಿತುರಗರಥ ಪಾಯದಳ ಘನ
ತರದ ದಿವ್ಯಾಸ್ತ್ರಾಲಯುವ ನೀಂ
ಪರುಕೆನಿಸೆನುತಲಿ ಪೇಳೆ ನಾರದ ನಗುತಲಿಂತೆಂದ ೧೫

ದಾನವೇಶ್ವರ ಕೇಳು ನಿನಗೆಣೆ
ಗಾಣೆ ಮರ್ತ್ಯದೊಳಾದೊಡೆಯು ನಾ-
ನೇನ ಹೇಳುವೆನಿಂದ್ರನೈಶ್ವರ್ಯಕ್ಕೆ ಸರಿಯುಂಟೆ
ಸೂನಶರನರಗಿಳಿಗಳಂತಿಹ
ಮಾನಿನಿಯರಪ್ಸರಿಯರಾ ಸುರ
ಧೇನು ಚಿಂತಾಮಣಿಯು ಕಲ್ಪದ್ರುಮಗಳಿಹುವಲ್ಲಿ ೧೬

ಸುರಮುನೀಶ್ವರ ದೇವಪತಿಗಿವು
ದೊರೆದ ಬಗೆಯಂತೆನಲು ನುಡಿದನು
ಶರಧಿರಾಜನು ನಿನ್ನ ಪಿತ ಪೂರ್ವದಿ ಸುರಾಸುರರು
ಶರಧಿಯಿನು ಮಥಿಸಿದರುಮದರೊಳು
ದೊರೆದುದೆಲ್ಲವ ಮೋಸದಿಂದಲಿ
ಸುರರಿಗಿತ್ತನು ಹರಿಯು ಮೋಹಿನಿರೂಪವನು ತಳೆದು ೧೭

ನಾರದನ ವಾಕ್ಯವನು ಕೇಳಿ ವಿ-
ಚಾರಮಾಡುತ ಕನಲಿ ಮನದೊಳು
ಮೀರಿದುಪಚರ್ಯೆಯಲಿ ತಾಂ ಬಿಳ್ಕೊಟ್ಟು ಮುನಿಪತಿಯ
ಕ್ರೂರರಾಹುವ ಕರೆದು ನುಡಿದನು
ಸಾರುತಮರಾವತಿಯ ಲದಿತಿಕು-
ಮಾರಗರುಹುವುದೆನ್ನ ಮಾತನು ನೀನು ನಿರ್ಭಯದೆ ೧೮

ಶರಧಿಮಥನದಿ ಪಡೆದುದೆಲ್ಲವ
ಭರದಿ ತಂದೊಪ್ಪಿಸುತ ನಮ್ಮಯ
ದೊರೆ ಜಲಂಧರನಾತನಿಗೆ ಶರಣಾಗದಿರೆ ನಿನ್ನ
ತರಿದು ಯುದ್ಧದೆ ನಿರ್ಜರರ ಶಿರ
ವರಿದು ಮೋಣಪುರಾವತಿಯ ಪುರ
ಕರಸನಾಗದೆ ಬಿಡನು ಕೇಳಿದು ಬರಿಯ ಮಾತಲ್ಲ ೧೯

ಆದ ಕತದಿಂದಖಿಳವಸ್ತುವ
ಮೋದದಿಂದಲಿ ತಂದ ಸುರಪತಿ
ಪಾದಕರ್ಪಿಸಿ ಬೇಡು ದಯೆಯನು ತೊರೆದು ವೈರವನು
ಆದಿಯಲಿ ದೈತ್ಯರಿಗೆ ವಂಚನೆ
ಗೈದುದೆಲ್ಲವ ಮನ್ನಿಸುವನೆಂ
ದಾದಿತೇಯಂಗರುಹು ಪೋಗೆಂದವನ ಬೀಳ್ಕೊಟ್ಟ ೨೦

ದನುಜಪತಿಯಾಜ್ಞೆಯನು ತಳೆಯುತ
ಲನಿಮಿಷರ ಪಟ್ಟಣವ ಪೊಕ್ಕನು
ಮನದಿ ಮೆಚ್ಚಿದನಮರಪುರವೈಭವಕೆ ತಲೆದೂಗಿ
ಕನಲಿ ರಭಸದೊಳಮರನಾಥನ
ಸನಿಹಕೈದುತೆ ಗಾಢಗರ್ವದಿ
ವಿನಯವಳಿದೆಂದನು ಜಲಂಧರನೊರೆದ ಹದನವನು ೨೧

ಕೇಳಿ ಕಿಡಿಕಿಡಿಯಾಗಿ ಚಿತ್ತದಿ
ತಾಳಿ ರೌದ್ರಾವೇಶವನು ಕ-
ಣ್ಣಾಲಿಯೊಳು ಕೆಂಡಗಳ ಸೂಸುತ ಜಡಿದು ಖಂಡೆಯವ
ತೋಳಗೆಗಹುತ್ತಬ್ಬರದಿ ಕಡು
ಕೀಳುಮಾತನು ಪೇಳ್ವ ಜಲಕುಲ
ಮೌಳಿಗಿಂತೆಂದನು ಸುರೇಶ್ವರನಧಿಕ ಖಾತಿಯಲಿ ೨೨

ಅನಿಲ ಕಾದಂಬಿನಿಗೆ ಸೋಲ್ವನೆ
ವಿನುತೆನಂದನಗುರಗವೆಣೆಯೇ
ಘನತರದ ಕೇಸರಿಗೆ ನರಿ ಪಾಸಟಿಯೆ ಕೇಳಿಲೆವೊ
ಶುನಕ ಸಿಂಹದ ಹೆಣ್ಣ ಯಾಚಿಸಿ
ದನುವಿದಾಯಿತು ಬರಿದೆ ಗಳಹದೆ
ಯನುವರಕೆ ನಿಮ್ಮೊಡೆಯನನು ನೀಂ ಕೊಂಡುಬಾರೆಂದ ೨೩

ಸುರಪನಾಡಿದ ನುಡಿಗೆ ರಾಹುವು
ಕೆರಳುತೆಂದನು ಸಾಕೆಲವೊ ನೀಂ
ಬರಿಯ ಮಾತಿನ ಮಲ್ಲನೆಂಬುದನರಿಯೆನೇ ನಾನು
ಮರೆಯದಿರು ಕೇಳಿದರ ಫಲ ಮುಂ
ದರಿವೆ ಯುದ್ಧದೊಳೆನುತಲಲ್ಲಿಂ
ಮರಳಿ ಬಂದರುಹಿದನು ಶಕ್ರನ ಗರ್ವದುರವಣೆಯ ೨೪

ಕೇಳುತಲಿ ಖತಿಗೊಂಡು ನಿರ್ಜರ
ಜಾಲವನು ಸುಡುಸುಡುವೆನೆನ್ನನು
ಬೀಳುಗಳೆದನೆ ಸುರಪನೆನ್ನುತ ತಿರುಹಿ ಮೀಸೆಯನು
ಹೇಳುಹೇಳೆನ್ನೊಮ್ಮೆ ಫಡಫಡ
ಖೂಳನೇಂ ಪೇಳಿದನು ಸೇನೆಯು
ಕಾಳಗಕೆ ಪೊರಮಡಲಿ ಶೀಘ್ರದೊಳೆಂದು ಘರ್ಜಿಸಿದ ೨೫

ವರಜಲಂಧರ ನಿಂತು ಯುದ್ಧಕೆ
ಬರುತ ಲಿರಲದ ಕಂಡು ನಾರದ
ಭರದಿ ವಾಸವನೆಡೆಗೆ ಬಂದಿಂತೆಂದನೀ ನುಡಿಯ
ನೆರಹು ಸೇನೆಯನೇಳು ಬೇಗನೆ
ಧುರಕೆ ನೀನನುವಾಗು ಬರುತಿಹ
ನರಿಭಯಂಕರನಾ ಜಲಂಧರ ನಿನ್ನ ಗೆಲಲೆಂದು ೨೬

ಮುನಿಪನೆಂದುದ ಕೇಳಿ ಕೈ ಹೊ–
ಯ್ದು ನಿಮಿಷಾಧಿಪನೆಂದನಮಮಾ
ಘನಘರಾಕ್ರಮಿಯೆಂದು ಪೇಳುವೆ ಯವನಬಲ ಸಹಿತ
ಅನುವರದಿ ಸೋಲಿಸುತ ನಿಮಿಷದೊ
ಳಿನಜನತಿಥಿಯುಮಾಳ್ಪೆ ನೀಂ ನೋ–
ಡೆನುತ ಗರ್ವದಿ ನುಡಿದು ಮತ್ತಿಂತೆಂದ ನಸುನಗುತ ೨೭

ಅಂದು ಹರನೊಳು ಬಯಸಿದಾಫಲ
ಮೆಂದು ಲಭಿಪುದೆನುತ್ತಲಿರ್ಪಪೆ
ನಿಂದೆನಗೆ ತಾನಾಗಿ ದೊರಕಿರಲಾನುಪೇಕ್ಷಿಸಲು
ಮಂದಮತಿಯೇ ತನ್ನ ಸತ್ವವ
ಮುಂದಿನಾಹವದೊಳಗರಿಯಬಹು
ದೆಂದು ನುಡಿದನು ಹಿಂದುಮುಂದುಗಳೊಂದ ನೋಡದೆಯೆ ೨೮

ಆ ತಪೋನಿಧಿಯೊಡನೆ ದರ್ಪದೊ
ಳೀತೆರದಿ ಗರ್ವೋಕ್ತಿಗಳ ಪುರು
ಹೂತ ನುಡಿಯುತಲಿರ್ಪ ಸಮಯದಲೊರ್ವನೈತಂದು
ಘಾತಮಾದುದು ಜೀಯ ಸುರರ ನಿ–
ಪಾತಗೈಯಲು ಮುತ್ತಿಹನು ಕಡು
ಖಾತಿಯಿಂದಲಿ ಕಲಿಜಲಂಧರ ನಮ್ಮ ಪಟ್ಟಣವ ೨೯

ಕೇಳಿ ಕಿಡಿಕಿಡಿಯಾದನಾಗಳೆ
ಕಾಲಭೈರವನಂತೆ ರೋಷವ
ತಾಳಿ ಕರೆಸಿದನೆಲ್ಲ ದಿಕ್ಪಾಲಕರ ಶೀಘ್ರದಲಿ
ಕಾಳಗಕ್ಕನುವಾಗಿರೆನುತಲಿ
ಪೇಳಿ ಸೇನೆಯ ನೆರಹಿ ನಿರ್ಜರ
ಜಾಲವನು ತಾಂ ಕೂಡುತರಿಗಳ ಸೈನ್ಯಕಿದಿರಾದ ೩೦

ಅಪರಿಮಿತ ಸೇನೆಯನು ನೋಡುತೆ
ಕುಪಿತನಾದನು ಮನದೊಳಾ ಕ-
ಶ್ಯಪನ ಸೂನುವ ನೋಡಿ ವೀರಜಲಂಧರನು ಬಳಿಕ
ಸುಪರಿವಾರವ ಬೆರಸುತಾಹವ
ನಿಪುಣ ನಾರಾಚಗಳ ಸುರಿಯುತ
ವಿಪುಲಸೇನೆಯನೊತ್ತಿ ಶಕ್ರನೊಳೆಂದನೀತೆರದೆ ೩೧

ಬಾರೆಲವೊ ಹೆಂಬೇಡಿ ನಾಟ್ಯದ
ನಾರಿಯರ ಕೂಡಾಟವಲ್ಲಿದು
ಬೀರತನವಿಹುದಾದೊಡೀಗಳೆ ತೋರು ಸಂಗರದಿ
ಆರಬಲವನು ನಂಬಿ ಬಂದೆ ಯ-
ದಾರು ಕಾಯ್ವರು ನಿನ್ನೊಳೀಗಲು
ತೋರಿ ಕರುಣವ ಕ್ಷಮಿಪೆನೆನ್ನನು ನಂಬಿ ಶರಣಾಗು ೩೨

ದನುಜನೆಂದುದ ಕೇಳಿ ದಿವಿಜರ
ಮನಕೆ ಖತಿಯೇರಲ್ಕೆ ತಮ್ಮಯ
ಧನುವ ಜೇವಡೆಯುತ್ತ ದಿವ್ಯಾಸ್ತ್ರಗಳನಳವಡಿಸಿ
ಶುನಕ ಸುಮ್ಮನೆ ತೊಲಗು ಬಾಣಕೆ
ತನುವ ತೆರದಿರು ಮರುಳೆ ಕೆಲಸಾ
ರೆನುತ ಕರೆದರು ಬಾಣವರ್ಷವ ದಿವಿಜರೊಗ್ಗಾಗಿ ೩೩

ಕರೆದ ಶರವರ್ಷವನು ಖಂಡಿಸಿ
ಸುರರನೆಲ್ಲರ ತರಬುತಿರೆ ಬಲ
ಪಿರಿದು ಬೆದರಲು ಕಂಡು ಸುರಪತಿ ಮುಳಿದು ಮಾರಾಂತು
ಧರಣಿಯೊಳಗತಿವೀರ ನೀನೇ
ಸರಿಕಣಾದೊಡೆ ಧುರದೊಳೆನ್ನಯ
ಸರಳಸವಿಯನು ಸವಿದು ನೋಡೆನುತೆಚ್ಚ ಮೊದಲಿಸಿ ೩೪

ಒತ್ತಿ ಬಹ ಕೂರಂಬುಗಳ ಮೂ-
ವತ್ತು ಶರಗಳನೆಚ್ಚು ಹುಡಿಗೈ
ದೊತ್ತರಿಸೆ ಕರಿತುರಗರಥವಾಯದಳವೆಲ್ಲವನು
ಮತ್ತೆ ತೊಂಬತ್ತರಲಿ ವ್ಯೂಹವ
ಕತ್ತರಿಸಿ ವಾಸವನ ಪರಿಘದೊ
ಳೆತ್ತಿ ಬಾಂದಳಕೆಸೆದು ರೋಷದಿ ಪಿರಿದು ಬೊಬ್ಬಿರಿದ ೩೫

ದಾನವಾಧಿಪನುರವಣೆಗೆ ತಾ
ಮಾನಸದೊಳುರೆ ಮುಳಿದು ಸುರಪತಿ
ಸೇನೆಯನು ವರವಜ್ರದಿಂದಲಿ ತರಿಯುತಿರೆ ಕಂಡು
ಕಾನನದಿ ಹಸಿದಿರ್ಪ ಕೇಸರಿ
ಗಾನೆಯಿದಿರಾದಂತೆ ಸಮರಕೆ
ನೀನೆ ಬಂದಿಹೆ ಭಾಪು ಲೇಸಾಯ್ತೆಂದನಮರಾರಿ ೩೬

ಸಾಕುಸಾಕೆಲೆ ಮುರುಳೆ ಬರಿದೆಯಿ-
ದೇಕೆ ಗಳಹುವೆ ಶೂರನಾದೊಡೆ
ನಾಕವನು ನೀ ಜೈಸು ನೋಡುವೆ ನಿನ್ನ ವಿಕ್ರಮವ
ಲೋಕದೊಳಗುಳ್ಳಖಿಳ ಖಳಕುಲ
ಭೀಕರನು ತಾನೆನಿಸಿ ಮೆರೆಯುವ
ಪಾಕಶಾಸನನರಿವಿನಾಶಕನೆಂದು ತಿಳಿಯೆಂದ ೩೭

ಸುರಪನೆಂದುದ ಕೇಳಿ ದನುಜನು
ಕೆರಳಿಸುತ ಕಂಗಳನು ತನ್ನಯ
ಪರಿಘವನು ತಿರುಹುತ್ತ ತೆರಳಿಚಿ ದೇವಸೈನ್ಯವನು
ಮೆರೆವ ರಥವಾಜಿಗಳ ಘನಮದ
ಕರಿಗಳನು ತರಿದೊಟ್ಟಿ ಚಾಪವ
ತರಿಸುತೈತಂದಷ್ಟದಿಕ್ಪಾಲಕರ ಮುತ್ತಿದನು ೩೮

ಆರುಶರದಲಿ ಶಕ್ರನನು ಹದಿ
ನಾರರಲಿ ನೈಋತನ ಮೂವ
ತ್ತಾರುಬಾಣದಿ ವರುಣಕಾಲರನೇಳು ಕೂರ್ಗಣೆಯಿಂ
ವೀರನಾದನಿಲನ ಕುಬೇರನ
ಮೂರು ನಾರಾಚದೊಳಗನಲನ
ನೂರರಲಿ ಮತ್ತುಳಿದ ಸೇನೆಯ ಪೊಡೆದು ಬೊಬ್ಬಿರಿದ ೩೯

ಬವರದಲಿ ಕೈಗಟ್ಟಿ ಸೋತರು
ದಿವಿಜರೆಲ್ಲರು ದನುಜನಾಟೋ
ಪವನು ನೋಡುತೆ ಬೆದರಿ ಕಾಲ್ಗಳಿಗಿತ್ತರಪ್ಪಣೆಯ
ಕವಿವ ಭಟನೊರ್ವನನು ಮೇಣಾ
ಹವದಿ ಕಾಣದೆ ನಗುತ ಕಡುವೈ
ಭವದಿ ಜಯಭೇರಿಯನು ಹೊಡೆಸಿದ ಕಲಿಜಲಂಧರನು ೪೦

ಮೆರೆವ ನಿರ್ಜರಪುರವ ಕಾಣುತೆ
ಪರಮವಿಭವದಿ ಪೊಕ್ಕು ದಿವಿಜರ
ಧರಣಿಗಟ್ಟಿದನರಿಭಯಂಕರನಾ ಜಲಂಧರನು
ಪಿರಿದುಬಳಲುತೆ ಶೋಕದಿಂದುರು
ತರದ ದಾರುಣವನವನಾ ನಿ
ರ್ಜರರು ಪೊಕ್ಕರು ಮನದಿ ನೆನೆಯುತ ಕಾಲಭೈರವನ ೪೧

——:——

# ಐದನೆಯ ಸಂಧಿ

**ಸೂಚನೆ**

ವಾಣಿಯರಸನ ಸಹಿತ ತಾ ಗೀ–
ರ್ವಾಣಪತಿ ಮೊರೆಯಿಡೆ ಸುದರ್ಶನ
ಪಾಣಿ ಕೃಪೆಯಿಂದಭಯವನು ನೀಡಿದನು ತಾನೊಲಿದು

ಚಿತ್ತವಿಸು ಮುನಿನಾಥ ನಿರ್ಜರ
ರಿತ್ತ ದುಗುಡದಿ ದಿನವ ಕಳೆಯುತ
ಮತ್ತೆ ಬಂದುದೆ ಕಷ್ಟವೆನುತಲಿ ಮನದಿ ಮಿಡುಕುತ್ತೆ
ಸುತ್ತಮುತ್ತಲು ನೋಡಿ ನಡುಗುತ
ಲೆತ್ತ ದೈತ್ಯನು ಬಂದು ತಮ್ಮನು
ಮುತ್ತಿಮುರಿವನೊ ಯೆನುತಲಂಜುತ ಬಂದರಜನೆಡೆಗೆ ೧

ವಾರಿಜಾಸನ ಸನಕವಂದಿತ
ನಾರಿದಾದಿಮುನೀಂದ್ರಸೇವಿತ
ನೀರಜಾಂಬಕತನಯ ಜೀವರ ಜನ್ಮಕಾರಣನೆ
ಚಾರುತರವಿಗ್ರಹ ಚತುರ್ಮುಖ
ಮಾರನಗ್ರಜ ವೇದಪುರುಷನೆ
ಶಾರದಾಪ್ರಿಯ ರಕ್ಷಿಸೆನುತಲಿ ಮಣಿಯೆ ಸುರನಿಕರ ೨

ಎರಗಿ ದೀನತೆಯಾಂತು ನಿಂದಿಹ
ಸುರಸಮೂಹವ ನೋಡಿ ಕಮಲಜ
ಕರುಣದಿಂ ಸಂತೈಸಿ ಸರ್ವರ ನುಡಿದನಿಂತೆಂದು
ಮೊರೆಯನಿಡುವಿರದೇಕೆ ನಿಮಗಾ
ವರಿಸಿಕೊಂಡಿಹ ಕಷ್ಟಮಾವುದು
ಭರದೆ ಪೇಳುವುದೆನಲು ವಾಸವನೆಂದನಿಂತೆಂದು ೩

ದೇವ ಲಾಲಿಸು ಪೇಳ್ವೆ ದಾನವ
ಭೂವರನು ತಾನೊರ್ವನೆಮ್ಮಯ
ದೇವಲೋಕವ ಸೂರೆಗೊಂಡನು ನಿಜಪರಾಕ್ರಮದಿ
ಸಾವುದೇ ಲೇಸೆನಿಸಿತದನಿ–
ನ್ನಾವು ಪೇಳಲಶಕ್ಯವದರಿಂ
ನೀವೆ ಗತಿಯೆಂದೆನುತ ಕಂಬನಿಮಿಡಿದನಮರೇಂದ್ರ ೪

ಕೇಳು ನಿರ್ಜರನಾಥ ಚಿಂತೆಯ
ತಾಳಿ ಕಳವಳಿಸದಿರು ಚಿತ್ತದಿ
ಕಾಲಮಹಿಮೆಯ ಮೀರಬಲ್ಲವರಾರು ಲೋಕದಲಿ
ಪೇಳಲೇನಹುದಿನ್ನು ನಡೆ ಸಿರಿ
ಲೋಲನಿಗೆ ಮೊರೆಯಿಡಲು ನಿಮ್ಮನು
ಪಾಲಿಪನು ಕಾರುಣ್ಯಮೂರುತಿ ಭಕ್ತಪ್ರಿಯನಲ್ತೆ ೫

ಹಿಂದೆ ರಾವಣ ಕುಂಭಕರ್ಣರ
ಕೊಂದನಬ್ಧಿಯ ಮಥನಕಾಲದಿ
ಮಂದರಾದ್ರಿಯ ಪೊತ್ತು ಸುಧೆಯನು ಕರುಣಿ ನಿಮಗಿತ್ತ
ಅಂದಿನಿಂ ಪಿತನಂತೆ ಪೊರೆದವ
ನಿಂದು ಬೇಡಲು ರಕ್ಷಿಸನೆ ಗೋ–
ವಿಂದ ತನ್ನನು ನಂಬಿದರ ಕೈಬಿಡನು ಕೇಳೆಂದ ೬

ಇಂತಬುಜಸಂಭವನು ಮಿಂದ್ರನ
ಸಾಂತ್ವನುಡಿಯಿಂದಾದರಿಸಿ ಸುರ
ಸಂತತಿಯ ತಾ ಕೂಡಿಕೊಂಡೈತರುತಲಿದಿರಿನಲಿ
ಕಂತುಪಿತ ವೈಕುಂಠಪತಿಗೆ
ನ್ನಂತೆ ಹಿತರಾರೆಂದೆನುತ ಪೇ-
ಳ್ವಂತೆ ಮೊರೆಯುವ ಕ್ಷೀರವಾರಿಧಿ ಕಣ್ಗೆ ಗೋಚರಿಸೆ ೭

ಕಳೆಕಳೆದು ಭವಪಾಶಬಂಧವ
ಜಲಚರಿಂದ ರೂಪಿನಲಿ ಮುಕ್ತರು
ನಲಿದರೆನೆ ನೊರೆಬುದ್ಬುದಂಗಳು ಹರಿಯ ಕೀರ್ತಿಯತು
ಬೆಳಗುತಿಹುವೆಂಬಂತೆ ಧವಳತೆ
ಬೆಳಗೆ ಲಕ್ಷ್ಮೀಲಲನೆಯರಸನ
ನಿಲಯ ಮಧ್ಯದಿ ರಂಜಿಸಲು ನೆರೆಮೆರೆದುದಾ ಶರಧಿ ೮

ಮೆರೆವ ಜಲಧಿಯ ಮಧ್ಯದಲಿ ಶ್ರೀ-
ಹರಿಯು ಫಣಿತಲ್ಪದಲಿ ಪವಡಿಸಿ
ಸಿರಿಯು ಪಾದವನೊತ್ತೆ ಸನಕಸನಂದನಾದಿಗಳು
ಕರವ ಮುಗಿಯುತ ಪೊಗಳೆ ದೇವನ
ನುರುತರದ ಭಕ್ತಿಯಲಿ ಸೇವಿಸು
ತಿರಲು ಸುರರೈತಂದು ಮಣಿದರು ಪಾವನಾತ್ಮಕಗೆ ೯

ಬಂದ ದೇವರ್ಕಳನು ಕಂಡು ಮು-
ಕುಂದ ಸನ್ಮಾನಿಸುತ ಕುಶಲವ
ನಂದು ಕೇಳಲು ವನಜಸಂಭವನೊರೆದನಿಂತೆಂದು
ತಂದೆ ಲಾಲಿಸು ಮೊರೆಯ ವೀರ ಜ-
ಲಂಧರನು ಕಡುಕ್ರೂರತನದಿಂ
ದಂದಗೆಡಿಸಿಹನಮರನಿಕರವ ಪೇಳಲೇನಿಹುದು ೧೦

ಅನಿಲ ಚಲಿಸನು ಖಳಗೆ ಬೆದರುತ
ಲನಲ ಶಿಖೆಯನು ತೋರದಿಹನತಿ
ಪೊನಲುಭೀತಿಯು ಹೊದ್ದೆ ನಿರಋತಿ ವರುಣ ಮುಖ್ಯರಿಗೆ
ಮನದ ದುಗುಡದೊಳಿಂದ್ರ ಘನ ಕಾ-
ನನವ ಸೇರಿಹನವನ ಪರಿಯನು
ನೆನೆಯಲಸದಳ ಕಾಂತಿಗುಂದಿ ಕುಬೇರನಿರ್ದಪನು ೧೧

ದೇವ ನಿನ್ನಯ ಮನಕೆ ಗೋಚರ
ಮಾವುದಾಗದು ಸರ್ವಗತನಿಗೆ
ನಾವು ಪೇಳುವುದೇನು ಸುರರನು ಹಿಂದೆ ಪೊರೆದಂತೆ
ಓವಿ ನೀ ನೋಡದಿರೆ ಕೇಳ್ಕಂ
ದಾವನಧಿಯಾತ್ಮಜನು ದೌಷ್ಟ್ಯದೊ
ಳೀವಿಬುಧ ಸಂತತಿಗೆ ನಾಶವ ತಾರದಿರನೆಂದ ೧೨

ವನಜಭವನಿಂತರುಹೆ ಕೇಳ್ದಾ
ವನಜದಳಲೋಚನನು ದಿವಿಜರ
ಮನಕೆ ಶಾಂತಿಯನೀವ ಕತದಿಂದರಸಿ ರಮೆಯೊಡನೆ
ಮನದೆ ತಾ ನಸುನಗುತೆ ಪೇಳ್ದನು
ವನಜಮಂದಿರೆ ದೇವರಿಪುವನು
ವನಜಮಿತ್ರನ ಪುತ್ರನತಿಥಿಯ ಗೈದು ಬಹೆನೆಂದ ೧೩

ಕರೆದವರ ಸೇವೆಯಲಿ ತೊಡಗಲು
ನಿರುತ ಕೈಗಟ್ಟಹುದ ಕಾಣೆನೆ
ಚರಣಸೇವಕಿಗಿಂದು ಪೇಳುವ ಕಾರಣಮದೇನೊ
ವರಮುನಿಗಳೆಡೆಯಲ್ಲಿ ಸೆರೆಯಗಾ
ಗಿರುವೆನಿಲ್ಲದೆ ಲೋಗರಂತಿರೆ
ಪೊರೆವೆಯೇಂ ಮನೆಯವರ ಸತಿಸುತರೇಕೆ ನಿನಗೆನಲು ೧೪

ಜರೆವುದೇತಕೆ ಕಾಂತೆಯೆನ್ನನು
ನಿರುತ ನಿನ್ನಗಲಿಕೆಯ ಸಹಿಸೆನು
ಚರಣಭಕ್ತರ ಪೊರೆಯೆ ನಿನ್ನಳಿದಾವ ಕಾಲದಲಿ
ಇರುವೆನೊರ್ವನೆ ಹೇಳು ಹೇಳೀ
ತೆರದ ಕಟಕಿಯ ಮಾತಿದೇತಕೆ
ಧರಿಸಿಕೊಂಡಿಹೆ ವಕ್ಷದಲ್ಲಿಯೆ ಪ್ರೇಮತಮಳೆಂದು ೧೫

ಅಮಿತ ವಿಭವದೊಳಿರ್ದ ನಾಕವ
ಕುಮತಿ ಬಲದಲಿ ಗೆಲ್ದು ಧಾರಿಣಿ
ಗಮರರನು ತಾ ನೂಕಿ ಮೆರೆಯುತ್ತಿಹ ಜಲಂಧರನ
ಸಮರದಲಿ ಕೊಂದೆನ್ನ ನಂಬಿದ
ಸುಮನಸರ ಪಾಲಿಸದೆ ಬಿಡೆನೆನು
ತಮಲಮೂರುತಿ ನುಡಿಯಲಿಂತೆಂದಳು ಸರೋಜಭವೆ ೧೬

ಶರಧಿರಾಜಕುಮಾರನೆಂದೊಡೆ
ಹಿರಿದು ಸೋದರ ಮಮತೆ ಮೂಡಿತು
ಧುರದಿ ನೋಯಲ್ಕುಡದೆ ದೈತ್ಯನ ಗೆಲಿಮ ಬಾರೆನಲು
ಅರರೆ ಮುನ್ನಿನ ದನುಜ ಬವಣೆಯ
ಮರೆದಳೀಸತಿಯೆಂದು ನಗುತಲಿ
ಸರಸಿಜಾಂಬಕನಿಂತು ಪೇಳ್ದನು ಸುರರ ಮೊಗನೋಡಿ ೧೭

ಬರಿದೆ ಚಿಂತಿಸುತಲೆದು ನೀವೀ
ಪರಿಯೊಳಳುಕುವುದೇಕೆ ನಿಮ್ಮಯ
ಪರಿಭವವ ಸೈರಿಪೆನೆ ಯೆನ್ನನು ಕ್ರೂರದಾನವನು
ಅರಿಯನೇ ದನುಜಾರಿಯೆಂಬುದ
ನಿರಲಿ ತೋರುವೆ ಧುರದೊಳೆನ್ನಯ
ವರಸುದರ್ಶನದಮಲಶಕ್ತಿಯನೆಂದನಸುರಾರಿ ೧೮

ದೇವ ನೀಕರುಣಾಳುವೆಂಬುದ
ನಾವರಿಯೆವೇ ಹಿಂದೆ ದೈತ್ಯರ
ನೀ ವಧಿಸಿದ್ದೈ ದೀನರಾಗಿರ್ದೆಮ್ಮ ಪೊರೆಯಲ್ಕೆ
ಕಾವವನು ನೀನಿರಲು ಬೇರಿ
ನ್ನಾವಭಯವೆಮಗೆನುತ ನುತಿಸಿದ
ನಾ ವಿರಿಂಚಿಯು ಭಕ್ತಿಭಾವದಿ ಮೋಕ್ಷದಾಯಕನ ೧೯

ಪಕ್ಷಿವಾಹನ ದುಷ್ಟಶಿಕ್ಷಕ
ಕುಕ್ಷಿಗತಬ್ರಹ್ಮಾಂಡಪಾಲಕ
ಇಕ್ಷುಚಾಪನ ಪಿತನೆ ಸಜ್ಜನರಕ್ಷ ಸುರಪಕ್ಷ
ಅಕ್ಷರನೆ ಯವ್ಯಕ್ತ ಕೇಶವ
ಲಕ್ಷಣೇಕ್ಷಣ ಜಿಷ್ಣು ಮುರಹರ
ರಕ್ಷಿಸೆಮ್ಮನಧೋಕ್ಷಜನೆ ಫಾಲಾಕ್ಷ ಪ್ರಿಯಸಖನೆ ೨೦

ಸುಮನಸರು ಹಿಂದಿರುಗೆ ಮಾಧವ
ನಮರಪುರವರಕೈದಿ ತನ್ನಯ
ವಿಮಲಶಂಖವನೂದಲದ ಕೇಳ್ದಾ ಜಲಂಧರನು
ಅಮರತತಿ ದೂರಲ್ಕದಾವನೊ
ಸಮರಕೈತಂದಿರ್ಪನೆಂಬಂ
ತಮಮ ತೋರುವುದೆನುತ ಗದ್ದುಗೆಯಿಳಿದು ಹೊರವಂಟ ೨೧

ಬಂದು ಕಂಡನು ಪುರದ ಬಾಹ್ಯೆಯು
ಸುಂದರೋದ್ಯಾನದಲಿ ನಿಂದಿರು
ಪಿಂದಿರೇಶನ ನುಡಿಸಿದನು ಗಹಗಹಿಸಿ ಕೈಹೊಯ್ದು
ಮುಂದಿಯೆಲ್ಲಿ ಮುರಾರಿ ಪೇಳ್ಕೈ
ಬಂದೆಯೊಬ್ಬನೆ ರಣವೊ ನಂದನ
ಸಂದರುಶನಾಕಾಂಕ್ಷೆಯೋ ನೀನುಡಿ ನಿಜೇಪ್ಸಿತವ ೨೨

ಎನಲು ನಸುಕೋಪವನು ತಳೆದಾ
ದನುಜಗೆಂದ ಮದಾಂಧ ಕೇಳೆಲೊ
ಶುನಕ ಸಿಂಗಕ್ಕೆಣೆಯೆ ನಿನ್ನನು ವಧಿಸೆ ಬಲಮೇಕೆ
ತನುವಿನೊಂದೇ ಬಲವೆ ಬಲ ಮ
ತ್ತನುಚರರ ಬಲ ಬಲವೆ? ಮುಂದಿದ
ಕನುವರದೊಳಿದಿರಾಗೆ ಕಾಣಲ್ಬಹುದು ಸಾಹಸವ ೨೩

ಆಹವದಿ ಮಾರಾಂತು ನಿಂದಗೆ
ಸಾಹಸಗಳಲ್ಲದೆ ವೃಥಾ ಸಂ
ಮೋಹಕದ ಮಾತಿಂಗೆ ಜಯುವಧುವೊಲಿಯುಳೆಂದೆಂಬ
ಈ ಹದನ ನೀಂ ತಿಳಿದು ಗಳಹದೆ
ಬಾಹುಬಲವಿರಲಳವಿಗೊಡೆನುತ
ಲಾಹರಿಯನೆಚ್ಚನು ಜಲಂಧರನಕ್ಷಯಾಸ್ತ್ರದಲಿ ೨೪

ಉರವಣಿಸಿ ಪಲ್ಮೊರೆದು ನಾಲ್ದೆಸೆ
ಗಿರದೆ ಪಸರಿಸುತ್ತೈದಿ ಬಹ ಘನ
ಸರಳುಗಳ ಖಂಡಿಸುತ ರೌದ್ರದಿ ಪರಸುದರ್ಶನವ
ಸರಸಿಜಾಂಬಕನೆತ್ತಿ ದೈತ್ಯೇ
ಶ್ವರಗೆ ಗುರಿಯಿಟ್ಟೆಸೆಯೆ ನಿಮಿಷದಿ
ಪರಿಘದಿಂದಂಬರಕೆ ಬಿಸುಟನದೇನು ಸಾಹಸಿಯೊ ೨೫

ಪದುಮನಾಭನು ಮೆಚ್ಚಿ ಕೇಳ್ಳಿ
ನ್ನ ಧಟಗಿದು ಬಹುಮಾನವೆಂದಾ
ಗದೆಯಲಿಟ್ಟನು ಕೂಡೆ ರಭಸದೊಳಾ ಜಲಂಧರನ
ಎದೆಯನೊತ್ತಲು ನೊಂದು ಬಿದ್ದನು
ಮದಕರಿಯುವೊಲು ಮೈಮರೆದು ನಿಮಿ
ಷದಲಿ ಕಂಗಳ ತೆರೆಯುತೆದ್ದನು ತೋಳುಗಳ ನೆಗಹಿ ೨೬

ನೆರೆ ಕಳಚಿ ಬಿದ್ದಿರ್ದ ಮಕುಟವ
ಕರಗಳಿಂದಲಿ ಕೊಂಡು ತನ್ನಯ
ಶಿರಕೆ ಧರಿಸುತ ಮತ್ತೆಯಂಗದೊಳಿರ್ದ ಧೂಳಿಯನು
ಭರದಿ ಕೊಡಹುತ ಮುಂದೆ ನಿಂದಿಹ
ಹರಿಯ ಮೊಗವನು ನೋಡುತಲಿ ತ-
ನ್ನೆರಡು ನಯನದೊಳುರಿಯ ಸೂಸುತ ನುಡಿದನಿಂತೆಂದು ೨೭

ಬಳಲಿದೆನ್ನನು ನೋಡಿ ಜಯವಧು
ವೊಲಿದಳೆಂದುಬ್ಬಿದಿರು ಸಮರದಿ
ಗೆಲುವ ಛಲಮಿಹುದಾದೊಡೀಗಲೆ ನಿಂದು ನಾರಾಂತು
ಬಲಿದ ಶೌರ್ಯದೊಳಿದನು ಮುರಿದೊಡೆ
ಕಲಹವಿನ್ನಿಲ್ಲೆನ್ನ ಬಾಣದ
ಬಲುಮೆಯನು ನೋಡೆನುತಲೆಚ್ಚನು ಹರಿಗೆ ಗುರಿಯಿಟ್ಟು ೨೮

ಜಲಜನಾಭನು ಮೈಮರೆದು ಮರು
ಗಳಿಗೆಯೊಳು ಚೇತರಿಸಿ ರೋಷದಿ
ಬಿಲುದುದಿಗೆ ವರನಾಃಣನೇರಿಸಿ ಬಾಣವನು ಪೂಡೆ
ಮೊಳಗುವ ಧ್ವನಿಯಿಂದೆ ಬಾಂದಳ
ದೊಳು ನುಡಿದುದಶರೀರವಾಣಿಯು
ಕಳಚು ಚಾಪದ ಶರವ ನಿನ್ನೊಳು ಹರಿಯದೀರಣವು ೨೯

ಧುರದೊಳೀದಾನವನ ನಾಂ ಸಂ
ಹರಿಸಿ ನಿಮ್ಮನು ಪೊರೆವೆನೆಂದಾ
ಸುರಗುರುವಿಗಿತ್ತಿಹನು ವಚನವ ಹಿಂದೆ ಪರಶಿವನು
ಬರಿದೆ ನಿನಗೇಕಿಂತು ಛಲವೆನು
ತೊರೆಯೆ ಕೇಳ್ದತಿ ಕನಲಿ ದೈತ್ಯೇ
ಶ್ವರನು ನುಡಿದನು ಗಾಢಗರ್ವದೊಳಸುರ ಹರಿಯೊಡನೆ ೩೦

ಸುರರ ಪೊರೆಯಲ್ಕೆನ್ನ ಹರಣವ
ಧುರದಿ ಕೊಳ್ಳುವ ಹರನ ಶೌರ್ಯವ
ನರಿದು ಬಹೆ ಸಾಕಿನ್ನು ಮಾಣೀ ರಣವ ನೀನೀಗ
ಇರಲಿ ತೋರುವೆನೆನ್ನ ಸತ್ತ್ವದ
ತಿರುಳನೆನುತಲಿ ಕಾಲಭೈರವ
ನುರುತರದ ಮಹಿಮೆಗಳನರಿಯದೆ ಭರದಿ ಹೊರವಂಟ ೩೧

———:———

# ಆರನೆಯ ಸಂಧಿ

ಸೂಚನೆ

ಖಳಕುಲಾಗ್ರಣಿ ನಡೆಯೆ ಸಮರಕೆ
ಕಲಿಜಲಂಧರನಂತೆ ವೇಷವ
ನಳವಡಿಸಿಕೊಂಡೈದಿದನು ಹರಿ ಬೃಂದೆಯರಮನೆಗೆ

ಬಳಿಕ ಮುಂದಾದುದನು ಕೇಳ್ಮುನಿ
ತಿಲಕ ಹರಿಯಲ್ಲಿಂದ ತನ್ನಯ
ಲಲನೆ ಕಮಲಜೆಯೆಡೆಗೆ ನಡೆತರಲಾಕೆ ನಸುನಗುತ
ಗೆಲಿದುಬಂದಿಹೆ ದೇವ ನೀ ಕೈ-
ಕೊಳೆನುತಲಿ ಪೂಮಾಲೆ ಹಾಕಲು
ಸಲೆಸುಹಾಸದಿ ಶೌರಿಯುರುಹಿದ ನಡೆದ ಸಂಗತಿಯ ೧

ಮಾಧವನ ನುಡಿಗೇಳಿ ಹಾಸ್ಯದ
ವಾದಕಿದೆ ಹೊತ್ತೆನುತ ಸಿರಿಸತಿ
ಕಾದಿ ರಣವೊಳ್ಸುರರ ಸೆರವಿಯ ಪೊರೆದೆ ನೀನಲ್ತೆ
ಪೋದ ಬಂದಾದಿಕ್ಕನರುಪುತೆ
ಬಾಧೆಗೊಳಿಸದೆ ಭಾವತನದಿಂ
ದಾ ದಯಾಪರನೆನ್ನ ತಮ್ಮನು ಬಿಟ್ಟು ಕಳುಹಿದನೆ ೨

ಹರಿಯನಾ ಸಿರಿದೇವಿ ಹಾಸ್ಯದಿ
ಜರೆಯುತಿರೆ ಜಗದೀಶ ಜಯಜಯ
ಪೊರೆಯೆನುತ ವೀಣೆಯೊಳು ನಾರಾಯಣನ ನಾಮವನು
ಪರಿಪರಿಯ ವಿಧದಿಂದೆ ನುಡಿಸುತ
ಮೆರೆವ ವೈಕುಂಠನನು ಕಂಡಾ
ಸುರಮುನೀಶ್ವರ ಬರಲು ಕಾಣುತೆ ನುಡಿದಳಾ ಕಮಲೆ ೩

ಸಾಕು ನಾರದ ಸುಮ್ಮನಿರು ನೀ-
ನೇಕೆ ಬಂದೇ ಹೊಗಳೆ ಹರಿಯನು
ಲೋಕದೊಳು ಬಲ್ಲಿದನ ಮಾಡುವೆ ನಿಖಿಳಗುಣನೆಂದು
ಈ ಕಮಲಲೋಚನನು ರಣಕೆ ಪ-
ರಾಕುಗೊಳ್ಳುತ ಪೋಗಿ ಸುರರ ನಿ-
ರಾಕುಳರ ನೆರೆಮಾಡಿ ಬಂದಿಹನದರ ಪರಿವೇಳ್ವೆ ೪

ಸಾಹಸಿಗ ಶಿವನಿವನ ಕೊಲ್ಲುವ
ನಾಹವದ ಮಾಣೆಂದು ಸಭದೊಳು
ದೇಹವಿಲ್ಲದ ವಾಣಿಯಾಯ್ತೆಂದೆನುತಲೆನ್ನೆಡೆಗೆ
ನೇಹದಿಂದೈತಂದು ಕುಳಿತಿಹ
ನೀ ಹದನ ಯೋಚಿಸಲಿಕಳವೇಂ
ಬಾಹುಬಲಕೆಮುಪ್ಪಿಲ್ಲ ಶೂರರಿಗೆಂದು ಸಿರಿನುಡಿಯೆ ೫

ಸಾಕು ಸಾಕೌ ಚಪಲೆ ನಿನ್ನ ವಿ-
ವೇಕವನು ನಾಂ ಬಲ್ಲೆ ಸುರನರ
ಲೋಕದಲಿ ಸುಳಿಸುಳಿದು ನಂಬಿದವರ್ಗೆ ಹಗೆಯೆನಿಪೆ
ಏಕಚಿತ್ತದೊಳೊರ್ವಗಾದರು
ನೀ ಕೃಪೆಯ ಮಾಡೆಹೆಯ ಭಜಿಸಿದ
ಪಾಕಶಾಸನನಾವಗತಿಯನು ಕಂಡ ಹೇಳೆಂದ ೬

ವಾರಿಜಾಕ್ಷನು ನಾರಸಿಂಹನ
ಘೋರರೂಪದೊಳಸುರನುದರವ
ಗೀರಿ ನಖದಿಂ ಬಗೆದು ಕರುಳಿನಮಾಲೆಯಾಂತಿರಲು
ದೂರದಿಂದಲಿ ನೋಡಿ ನಡುಗುತೆ
ಸಾರಿ ಭಕ್ತನ ಮೊರೆಯಹೊಕ್ಕ ವಿ-
ಚಾರವನು ನಾನರಿಯೆನೇ ಕಡುಧೀರಳಹೆಯೆಂದ ೭

ಹಿಂದೆ ಸೀತೆಯು ಪೆಸರಿನೊಳು ಬಲು
ಬಂಧನಕ್ಕೊಳಗಾಗಿ ಲಂಕೆಯು
ಸುಂದರೋದ್ಯಾನವಲಿ ಹಲುಬುತ ರಾಮರಾಮನುತ
ಕಂದಿ ಕುಂದುತ್ತಿರಲು ದೈತ್ಯನ
ಕೊಂದು ನಿನ್ನನು ತಂದ ಕರುಣಿಯು
ನಿಂದು ಪಳಿಯುತ್ತಿರ್ಪುದಿದು ನಿಜಧರ್ಮವೇ ಪೇಳೌ ೮

ಜಲಜಮಂದಿರೆ ಪೇಳ್ವೆ ಕೇಳೀ
ನಳಿನನಾಭನ ದಾನವೇಂದ್ರನು
ಗೆಲಿದುದಕೆ ಬೇರೊಂದು ಕಾರಣಮುಂಟು ತಿಳಿಯದನು
ಲಲನೆ ಬೃಂದೆಯು ಪಾತಿವ್ರತ್ಯದ
ಬಲುಮೆಯಿಂದಲಿ ಕಲಿ ಜಲಂಧರ
ಗೆಲಿದನೆನುತಲಿ ಪೇಳೆ ಚಂದಿರವದನ ಕೆಂಪಾಯ್ತು ೯

ಪೇಳಿದೆನು ತಿಳಿದನಿತನೆನ್ನಯ
ಮೇಲೆ ಖತಿಬೇಡೆನುತ ವೀಣಾ
ಲೋಲಮುನಿ ನುಡಿಯುತ್ತೆ ಬಳಿಕಾಶೌರಿಯನು ನೋಡಿ
ಆಲಿಸೈ ಹರಿ ನಿಮ್ಮ ವಾಗ್ಝರ
ಲೀಲೆ ಯೆಮಗೇಕೆನುತ ಲಕ್ಷ್ಮೀ
ಲೋಲನಂಘ್ರಿದ್ವಯಕೆ ವಂದಿಸಿ ಪೇಳ್ದನಿಂತೆಂದು ೧೦

ದೇವ ನೀನೇ ಸಕಲ ಜೀವರ
ಜೀವ ಚೇತನ ನಿನಗಗೋಚರ
ವಾವುದಿರ್ಪುದು ಬೇರೆ ಪೇಳುವುದೇನಿಹುದು ಹರಿಯೆ
ದೇವತತಿ ನಿನ್ನಂಗವಲ್ಲವೆ
ಪಾವನಾತ್ಮಕ ಪೊರೆವುದರಿಂದೇ
ಭಾವಭಕ್ತಿಯೊಳವರು ಭಜಿಸರೆ ನೀನೆ ಗತಿಯೆಂದು ೧೧

ಕಾಲಕಾಲನ ಸೇರಿ ದೈತ್ಯನು
ಕಾಳಗವನೆಸಗುವನು ಹರಿ ನೀ
ನಾಲಿಸಾತನ ಸತಿಯ ಧರ್ಮಕ್ಕೆಡರ ಕಾರದಿರೆ
ಶೂಲಪಾಣಿಯನುಳಿದು ಜಯಸಿರಿ
ಯೋಲವಿಸುತಾ ದಾನವನ ಜಯ
ಮಾಲೆಯಲಿ ಸಿಂಗರಿಸದಿಹಳೇ ದೇವ ಪೇಳೆಂದ ೧೨

ಏನಿದೇನೀ ಯುಕುತಿ ನಿನ್ನಾಯ
ಮಾನಸಕ್ಕೊಪ್ಪಿಹುದೆ ಮೋಹ್ಪರ
ಮಾನಿನಿಯರನು ಸೆಣಸಿ ಜೈಸಲು ಸಾಧ್ಯವೇ ಮುನ್ನ
ಮಾನಿಸಿಸತಿ ತಾ ನಮ್ಮ ಮೂರ್ವರ
ಸೂನುಗಳ ರೂಪವನು ಗೈದುದ
ನೀನರಿಯೆಯಾ ಹೇಳು ಹೇಳೆಂದೆನುತ ಹರಿ ನುಡಿಯೆ ೧೩

ಗರುಡವಾಹನ ನಿನ್ನ ನಂಬಿದ
ಸುರತತಿಯ ಪೊರೆಯಲ್ಕಸಾಧ್ಯವೆ
ಬರಿದೆ ನುಡಿಯೇಕಿಂತು ಸರ್ವರ ಪೊರೆವ ನೀನಲ್ತೆ
ಮೊರೆಯಕೇಳಿನ್ನೊಮ್ಮೆ ದೈತ್ಯೇ
ಶ್ವರನ ರೂಪವನಳವಡಿಸಿ ನೀ–
ತೆರಳಿದರೆ ಸಾಕೆಂದು ಮುಗುಳೆರಗಿದನು ಪದಯುಗಕೆ ೧೪

ಸುರರ ಸಲಹಲು ಪೋಪೆನೆಂಬಿನೆ
ಪರವಧುವಿನೊಡನಿರಲು ಬೇಹುದು
ತಿರಳದಿರೆ ಸಂಗರದಿ ಶೂಲಿಗೆ ಸಿದ್ಧವಪಜಯವು
ವರ ಪತಿವ್ರತೆಯವಳ ಭಂಗಿಸೆ
ಹರಿಯು ಕುತ್ಸಿತನೆಂದು ಸರ್ವರು
ಬರಿದೆ ಪಳಿವಂತಾಯ್ತುವಾಸೊಡೆ ಲೋಕಹಿತಮಲ್ತೆ ೧೫

ಏಳು ಚಿಂತಿಸಬೇಡ ಮುನಿಕುಲ
ಮೌಳಿ ನೀಂ ಸ್ಮರಿಸಿದೊಡೆ ಬಹೆ ನೀ-
ಪೇಳಿದಂತೆಸಗುವೆನೆನುತ್ತಲಿಯಭಯವೀಯಲ್ಕೆ
ಕೇಳುತತಿ ಸಮ್ಮುದವ ಚಿತ್ತದಿ
ತಾಳಿ ಮಣಿದಾ ಭಕ್ತಜನ ಸರಿ
ಪಾಲಕನ ಬೀಳ್ಗೊಂಡು ನಡೆವನು ದೇವಮುನಿರಾಯ ೧೬

ಇತ್ತಲಮರಾವತಿಯೊಳಸುರನು
ಮತ್ತಕಾಶಿನಿ ಬೃಂದೆಯೊಡನತಿ
ಯುತ್ತಮೋತ್ತಮವಾದ ಸೌಖ್ಯವನನುಭವಿಸುತಿರಲು
ಚಿತ್ತದಲಿ ನೆನಪಾಗೆ ಯುದ್ಧದಿ
ಚಿತ್ತಜಾರಿಯು ಗೆಲಲು ಪೋಪೆನೆ
ಸುತ್ತಪೇಳಲು ಕೇಳುತಿಂತೆಂದಳು ಸರೋಜಮುಖಿ ೧೭

ತರಳತನದಿಂದಾವ ಶೋಕವ
ನರಿಯೆ ನಾನಿದುವರಗೆ ನಿನ್ನನು
ವರಿಸಿ ಮುದದಿಂ ಸಕಲ ಸೌಖ್ಯವನನುಭವಿಸುತಿಹೆನು
ಅರಿವಿದಾರಣ ನಿನ್ನ ಶೌರ್ಯವ
ನರಿತಿಹೆನು ಕೇಳಾದೊಡೆನ್ನಯ
ಮೊರೆಯ ನೀನೆನಗೊಲಿದು ಬಿಡು ಪರಶಿವನ ಹಗೆತನವ ೧೮

ಶೂರತನಮುಂಟೆಂದು ಛಲದಲಿ
ಮೂರುಲೋಕದ ಜನಕನೆನಿಸಿಹ
ಮಾರಹರನಲಿ ಹಗೆಯೆ ಹರನೇ ನಮ್ಮ ಕುಲದೈವ
ತೋರು ಕರುಣವ ಬೇಡುವೆನು ತನ
ಗಾರು ಗತಿ ನೀನಿಂತೆಸಗಲೆನು
ತಾ ರಮಣಿ ಖೇದದಲಿ ನುಡಿಯಲು ಕೇಳುತಿಂತೆಂದ ೧೯

ಧುರದಿ ನಾಂ ಗೆಲಲಿಲ್ಲವೇ ನಿ-
ರ್ಜರರ ಧರಣೀಶ್ವರರನೊದವಿದ
ಹರಿಯ ನೀನಿದನರಿಯದವಳೇ ಶೂಲಿಯೆನಗಿದಿರೆ
ಧರಣಿಯಲಿ ಮೇಣ್ನಾಕದಲಿ ಸಂ-
ಗರದೊಳೆನಗಿದಿರುಂಟೆ ಬಿಡುಬಿಡು
ಬರಿದೆ ಚಿಂತಿಪುದೇಕೆ ಶಾಂತಿಯನೊಂದಿ ನೀನಿರದೆ ೨೦

ಮಾರಹರನೊಳು ಸಂಗರಕೆ ಕಡು
ಶೂರತನದೊಳು ಪೊರಟ ಸಮಯದಿ
ತೋರುತಪಶಕುನವನು ತಡೆಯುತ ಬೇಡಬೇಡೆನುತ
ವೀರರಮಣಿಯರಿಂತು ನುಡಿವುದು
ಭಾರಿಣಿಗೆ ಪೊಸತೆಂದು ಶೋಕಿಪ
ನಾರಿಯನು ನಲ್ನುಡಿಗಳಂದಲಿ ಸಂತವಿಸುತಿರಲು ೨೧

ಪಿಡಿದು ವೀಣೆಯ ನುಡಿಸುತಾಗಳೆ
ಕಡುಮುದದಿ ನಾರದ ಮುನೀಶ್ವರ
ಮಡದಿಯೊಡನಿಹ ದಾನವೇಂದ್ರನ ಭವನಕೈತರಲು
ಒಡನೆ ಪೀಠವನಿತ್ತು ಸತಿಸಹಿ
ತಡಿಗೆ ಮಣಿಯುತ ಕಲಿ ಜಲಂಧರ
ನಡಗರದಿ ಸತ್ಕರಿಸಿ ಬಳಿಕಿಂತೆಂದನವನೊಡನೆ ೨೨

ಸುರಮುನೀಶ್ವರ ಕೇಳಿನೆಗೆ ಸಂ-
ಗರದಿ ರುದ್ರನ ಗೆಲಲು ಮನವುರು
ತರದಿ ತವಕಿಪುದಾದೊಡೆನ್ನಯ ಬಲವನರಿದಂದು
ಬಂದೆ ಭೀತಿಯೊಳಳುಕುತಿಹಳೀ
ತರುಣಿಯನು ಸಂತೈಸಬೇಕೆನು
ತೊರೆಯೆ ಕೇಳ್ವಾರಮಣಿ ನುಡಿದಳು ಗದ್ಗದಸ್ವರದಿ ೨೩

ಲೋಕದೊಳು ಸಂಗ್ರಾಮದಲಿ ಮೂ-
ಲೋಕ ಪಿತನನು ಗೆಲುವರಿರ್ಪರೆ
ಲೋಕವಂದ್ಯನೆ ವೊಲಿದು ಯನ್ನಯ ಪತಿಗೆ ನೀತಿಯನು
ನೀ ಕರುಣದಿಂದೊರೆದು ಮೋಣೀ
ವ್ಯಾಕುಲೆಯ ಪೊರೆಯೆನುತ ಬಿದ್ದಳು
ಶೋಕದಿಂದಲಿ ಕುಸಿದು ನಾರದನಂಘ್ರಿಯುಗಳದೊಳು ೨೪

ಏಳು ಚಿಂತಿಸಬೇಡೆನುತ ಮುನಿ
ಕೋಳ ನಗೆಹುತಲೆತ್ತಿದನು ಬಳಿ
ಕಾ ಲತಾಂಗಿಯ ಸಂತವಿಸಿ ಕಳುಹುತ್ತಲಿಂತೆಂದ
ಕೇಳು ಸುರಪತಿ ನಿನ್ನ ಶೌರ್ಯವ
ನೀ ಲಲನೆ ತಾ ಬಲ್ಲಳೀ ನಡೆ
ಕಾಳಗಕ್ಕನುವಾಗು ನೀನಿದನರುಹದಿರು ಸತಿಗೆ ೨೫

ಕಂತುಹರನನು ಧುರದಿ ಸೋಲಿಸಿ
ಪಿಂತಿರುಗಿ ನೀನೈದಿ ಬಹ ಪರಿ
ಯಂತ ನಿನ್ನಯ ಸತಿಯು ಸಂತೈಸುವೆನೆನಲು ಕೇಳಿ
ಇಂತಿದರ ಮರ್ಮವನು ತಿಳಿದೊಡೆ
ಸಂತತವು ಕಾತರಿಸುವಳೆನುತ
ಕಾಂತೆಗರುಹಗೆ ನಗೆಯೆ ನಾರದ ನೆನೆದ ಸಿರಿವರನ ೨೬

ಎನಿತು ಕರುಣೆಯೊ ಶೌರಿ ಮತ್ತೆ
ನ್ನೆನಿತು ಸುಕೃತಿಯೊ ಮೌನಿ ಕೇಳ
ನ್ನೆನಿತು ಸತ್ವವೊ ಭಕ್ತಿಬಲವಿದ ಪೊಗಳಲಿನ್ನಳವೆ
ನೆನಹಿಗರ ದಿವ್ಯಾಂತರಂಗದಿ
ಮನೆಯ ಮೂಡಿಹ ದೇವ ನಿಜರೂ–
ಪನುಮರೆಸುತ್ತೈತಂದ ವೃತ್ತ್ಯೇಶ್ವರನ ರೂಪಿನಲಿ ೨೭

ಅರಿಯದಾದನು ನಾರದನು ಮುರ
ಹರನ ಮಾಯವ ಕಲಿ ಜಲಂಧರ
ಮರಳಿ ಬಂದಿಹನೆನುತ ಚಿತ್ತದಿ ಭ್ರಮಿಸುತಿಂತೆಂದ
ಅರೆರೆ ಕೌತುಕಮಲ್ತೆ ಕಡುಗಲಿ
ಧುರಕೆ ಪೋದಪನೆಂದು ನೀನೆನ
ಗೊರೆದು ಪಿಂದಿರುಗಿರ್ಪೆ ಭಾಪುರೆ ಲೇಸುಲೇಸೆಂದ ೨೮

ನಾರದನ ನುಡಿಗೇಳಿ ನಸುನಗು
ತಾ ರಮಾವರನೆಂದನೆಲೆ ಮುನಿ
ತೋರಿತಪಶಕುನಗಳು ಮಾರ್ಗದಿ ಬರಿದೆ ಶೂಲಿಯೊಳು
ವೈರಮೇಕೆನುತ್ತೈದಿದೆನು ಎನ
ಲಾರಯಿದು ವೃಂದೆಯನು ನೀಂ ಕರೆ
ತಾರೆನುತ ಸಂಭ್ರಮದೊಳಟ್ಟಿದ ಛದ್ಮ ಮುನಿವರನು ೨೯

ಹಿಡಿದ ಹಟವನು ಸಾಧಿಸದೆ ತಾ
ಬಿಡದ ತನ್ನಾಯು ರಮಣಗೋಸುಗ
ವಡಿಗಡಿಗೆ ಮನಮರುಗಿ ಕಾತರಿಸುವಳು ಶರ್ವನಿಗೆ
ಕಡುಬಕುತಿಯಲಿ ಕೈಮುಗಿದು ಮೊರೆ
ಯಿಡುವಳಾನತೆಯಾಗಿ ಮಾನಸ
ದೊಡೆಯನಿಗೆ ಸನ್ಮತಿಯ ನೀಡುವುದೆನುತಲಾ ಬೃಂದೆ ೩೦

ಈ ವಿಧದಿ ಭವನದಲಿ ಬೃಂದೆಯು
ಜೀವಿತೇಶನ ಸಲಹೆನುತಲಾ
ಭಾವಜಾರಿಯ ಬೇಡಿಕೊಳುತಿರೆ ಚಾರನೈತಂದು
ಆ ವನಿತೆಯಡಿಗೆರಗಿ ನುಡಿದನು
ದೇವಿ ಬಿನ್ನಹವಿಂದು ನಿಮ್ಮನು
ದೇವಮುನಿ ಕರಸಿಹನು ಬಿಜಯಂಗೈಯ್ಯಬೇಕೆಂದ ೩೧

ಕೇಳಿ ಹರುಷಿತೆಯಾಗಿ ಭಕ್ತಿಯೊ
ಳಾಲತಾಂಗಿಯು ಕೈಮುಗಿದು ಬಹ
ವೇಳಯರಿದಾ ನಾರದನು ಚಿಗಿದನು ನಭೋದೆಸೆಗೆ
ಪೇಳಲೇನಹುದಿನ್ನು ಲಕುಮಿಾ
ಲೋಲ ತಾನೆಸಗಿರ್ಪ ಮಾಯಾ
ಜಾಲವನು ಬಲ್ಲಳೆ ನಿಜೇಶ್ವರನಿರವನೀಕ್ಷಿಸುತ ೩೨

ವಲ್ಲಭನ ಮೊಗ ನೋಡುತಾತನ
ಮೆಲ್ಲಡಿಗೆ ವಂದಿಸುತ ಮುನಿಪತಿ
ಯಿಲ್ಲದಿರೆ ಮನನೊಂದು ಮೌನದೊಳಿರಲು ಸಿರಿವರನು
ಮೆಲ್ಲನಾ ಮಾನಿನಿಯ ನಿಜಕರ
ಪಲ್ಲವಂಗಳ ಪಿಡಿದು ನುಡಿದನು
ಸಲ್ಲಲಿತ ಮೃದುಮಧುರತರ ವಾಕ್ಸುಧೆಯ ಸಾರದಲಿ ೩೩

ಚಿಂತೆಯನು ಬಿಡು ರಮಣಿ ಕೇಳ್ನೀ
ಶಾಂತಮಾನಸಳಾಗು ದುಃಖದೊ–
ಳಿಂತು ಮೌನದಿ ರೋದಿಸುತಲಿರ್ದಪುದ ನಾಂ ನೋಡಿ
ಎಂತು ಸಹಿಸುವೆನಕಟ ನೀನೆ
ನ್ನಂತರಂಗದ ಜೀವ ನಿನಗಾಂ
ಕಂತುಹರನೊಳು ತೊರೆವೆ ವೈರವನೆಂದನಸುರಾರಿ ೩೪

ದಿವಿಜಮುನಿಪನ ದಿವ್ಯಮಹಿಮೆಯ
ವಿವರಿಸಲ್ಕೆನಗರಿದೆನುತ ಹರು
ಷವನು ತಾಳುತೆ ಭಕ್ತಿಯಿಂದಲಿ ಪತಿಯ ಸತ್ಕರಿಸೆ
ಭುವನಮೋಹಿನಿ ಬೃಂದೆ ಲಕುಮೀ
ಧವನ ಮಾಯವನರಿಯದೆಯೆ ನಿಜ
ಧವನೆನುತ ನೆರೆನಂಬಿ ನೆನೆದಳು ಕಾಲಭೈರವನ ೩೫

# ಏಳನೆಯ ಸಂಧಿ

---

**ಸೂಚನೆ**

**ದೋ**ಷರಹಿತನ ಕೂಡೆ ಚಾತು
ರ್ವ್ಯಾಸವೆಡಬಿಡದಾಹವದೊಳಾ
ವಾಸವಾರಿಯು ಕಾದಿ ಮಡಿಯಲು ನಲಿದುದಮರಗಣ

ಇನ್ನು ಮುಂದಣ ಕಥೆಯ ಕೇಳ್ಮುನಿ
ರನ್ನ ಶೌರಿಯು ಮೋಸವರಿಯದೆ
ತನ್ನ ಪತಿಯೆಂದೆನುತ ಸೇವಿಪಳಮಿತ ಬಹುತಿಯಲಿ
ಚನ್ನಕೇಶವಗೈದ ಮಾಯಾ
ಗನ್ನಗತಕಕೆ ಸಿಲುಕಿ ಬೃಂದೆಯು
ಮುನ್ನಿನಂತಾಚರಿಸುತಿರ್ದಳು ದನುಜಹರನೊಡನೆ

ಚಿತ್ತಜನ ಹಿತನೊಡನೆ ಕಾಲವ
ಹುತ್ತಗಜಗಾಮಿನಿಯು ಕಳೆಯುತೆ
ತೆತ್ತಳೀ ತೆರದಲ್ಲಿ ತನುವನು ದೈವಕೃತಮಲ್ತೆ
ಇತ್ತ ವೀರ ಜಲಂಧರನು ವರ
ಚಿತ್ತಜಾಂತಕನಿರವನೇ ಅರ
ಸುತ್ತ ಉತ್ಸಾಹದಲಿ ತಾನೈತಂದನತಿಭರದಿ ೨

ಬಂದು ಕೈಲಾಸಾದ್ರಿಯೆಡೆಯೊಳು
ನಿಂದು ಶಂಖವನೂದುತಿರೆ ಬಾ-
ಲೇಂದುಮೌಳಿಯು ಮನದೆ ವಿಸ್ಮಿತನಾಗುತ್ತೈತಂದು
ಬೃಂದೆಯರಸನ ಕಾಣುತಲಿ ನೀಂ
ಬಂದುದೇಕೆನೆ ಕೇಳ್ದು ದರ್ಪದೊ
ಳೆಂದನಾ ಧೂರ್ಜಟಿಯು ನೋಡುತ ಕಲಿ ಜಲಂಧರನು ೩

ಈ ರಣವಿ ಕೇಳೆನ್ನ ಹರಣವ
ಮಾರಹರ ತಾ ಕೊಳುವನೆಂದಶ-
ರೀರವಾಣಿಯು ಮುಖದೆ ಕೇಳುತೆ ಬಂದೆ ವಿಗ್ರಹಕೆ
ಸಾರತರ ಭುಜಬಲವ ತೋರುವೆ
ಧೀರ ನೀನಾಗಿರ್ದೊಡಳುಕದೆ
ಬಾರೆನುತ ಗರ್ವದಲಿ ಭುಜಗಳ ಹೊಯ್ದು ಬೊಬ್ಬಿರಿಯೆ ೪

ಬಳಿಕ ನಿಂದನು ದೈತ್ಯನೆದುರಲಿ
ಕಲುಷಹರ ಪರಮೇಶ್ವರನು ತಾ
ಕೊಳುಗುಳಕೆ ಮೊದಲಾಯ್ತು ಭರದಲಿ ಪದ್ಮಜಾದಿಗಳು
ಬಳಸಿ ನಿಂದರು ಸಮರವೀಕ್ಷಿಸೆ
ಕಳಕಳಧ್ವಾನದಲಿ ವರ ಬಾಂ-
ದಳದೆ ನೆಲೆಯಿಲ್ಲೆಂಬೊಲಾದುದು ನೆರೆಯೆ ಸುರಜಾಲ ೫

ಶೂಲವನು ನೆರೆನೆಗಪುತುಗ್ರಕ-
ರಾಳರೋಷವನಾಂತು ಪಶುಪತಿ
ಯಾಲಿಗಳು ಕೆಂಡಗಳ ಕಾರಲು ಸಿಡಿಲ ರಾವದೊಳು
ತೋಳಬಲುಹುಂಟೆಂದು ಬರಿದೇ
ಬೀಳುವೆಯ ಮಾತಾಡದಿದ ನೀಂ
ತಾಳಿಕೊಳ್ಳೆನುತೆತ್ತಿ ಹೂಳಿದ ಮಸ್ತಕಾಗ್ರದಲಿ ೬

ಘುಡುಘುಡಿಸುತಾರ್ಭಟಿಸಿ ರೋಷದಿ
ಮೃಡನ ಶೂಲವ ಪರಿಘದಿಂದಲಿ
ಪೊಡೆದು ಕೆಡಹಿದನಿಳೆಗೆ ಕರದಿಂ ಕಳಚಿ ಬೀಳ್ವಂತೆ
ಅಡಿಗಡಿಗೆ ಶರವರ್ಷದಿಂದಲಿ
ಬಿಡದೆ ಘಾತಿಸಿ ಕಲಿ ಜಲಂಧರ
ನುಡಿದನತಿಗರ್ವದಲಿ ಶೂಲಿಯ ಜರೆದು ಮೂದಲಿಸಿ ೭

ಕೊಳುಗುಳದಿ ಸುಮ್ಮಾನದಲಿ ಜಯ
ಲಲನೆ ಸೇರುವಳೆನುತ ಗರ್ವವ
ಬಳಸದಿರು ಸಲೆ ಕೇಳು ಹರ ನಿನ್ನೈದು ತಲೆಗಳನು
ನೆಲಕೆ ಕೆಡಹುತೆ ನಿನ್ನೊಳಡಗಿದ
ಕಲಿ ದನುಜರಸುಗಳನು ಕಕ್ಕಿಸಿ
ಛಲವ ತೀರಿಸಿಕೊಳ್ಳದೆಯೆ ಬಿಡೆನೆನುತ ಗರ್ಜಿಸಿದ ೮

ಏಕೆ ಸುಮ್ಮನೆ ಗಳಹುತಿರ್ದಪೆ
ಸಾಕು ನಿಲ್ಲಿಸು ನಿನ್ನ ಸುಗುಣಕೆ
ಲೋಕವೇ ಬೇಸರಿಸುತಿರ್ಪುದು ವೀರರಾದವರು
ಮೂಕರಂದದೊಳಿರುವರಲ್ಲದೆ
ಲೋಕದುರ್ಜಯನೆನುತ ನುಡಿವರೆ
ಯಾಕೆವಾಳ್ತನವಿರಲು ನಿನ್ನೊಳು ತೋರು ಸಂಗರದಿ ೯

ಚಿತ್ತಜಾರಿಯು ನುಡಿಯ ಕೇಳುತ
ಚಿತ್ತದೊಳ್ಮಿಗೆ ಕನಲಿ ಗುರು ತನ
ಗಿತ್ತ ದಿವ್ಯಾಸ್ತ್ರಗಳ ತಾ ಕೈಕೊಂಡು ಪುರಹರನ
ಮತ್ತೆ ಬಿರುನುಡಿಯಿಂದೆ ಜರೆಯುತೆ
ಸುತ್ತಿಸುತೆ ಘನಕಾರ್ಮುಕವ ಮೇ-
ಲೆತ್ತಿ ನುಡಿದನು ನೇತ್ರಯುಗ್ಮದಿ ಕಿಡಿಯನುಗುಳುತಲಿ ೧೦

ಸಂದ ರಕ್ಕಸರಂತೆ ಭಾವಿಸಿ
ಕೊಂದು ಪೋಗುವೆನಿವನನೆನುತಲಿ
ಬಂದಿಹೆಯ ಪೇಳೆಂದು ಬಾಣವ ಧನುವಿಗಳವಡಿಸಿ
ಇಂದು ಕೇಳಿದರಿಂದ ನಿನ್ನ ಸು–
ದಂದುಗಕ್ಕೆಡೆಯಾಗದಿರ್ದೊಡೆ
ಹಿಂದುಗಳೆಯೆನ್ನದಟ ನೀನೆಂದೆನುತ ಸೆಳೆದೆಚ್ಚ ೧೧

ರುಂಡಧರನಿದ ಕಂಡು ಚಾಪವ
ಮಂಡಲಾಕಾರದಲಿ ತಿರುಹುತ
ಖಂಡಿಸುತಲಾ ಶರವನವನ ಪರಾಕ್ರಮುಕೆ ಮೆಚ್ಚಿ
ಮಂಡೆದೂಗುತೆ ಮುಗುಳೆ ಜಗದು–
ದ್ದಂಡ ದೈತ್ಯನ ಕರದೊಳಿಹ ಕೋ–
ದಂಡವನು ಕತ್ತರಿಸಿ ಕೆಡಹಿದನೈದು ಶರಗಳಲಿ ೧೨

ಬಿಲ್ಮುರಿಯೆ ಸುರವೈರಿ ರೋಷದಿ
ಕಲ್ಮರಂ ಬಿರಿವಂತೆ ಗರ್ಜಿಸಿವು
ಪಲ್ಮೊರೆದು ಬೇರೊಂದುಬಿಲ್ಗೊಂದಡರಿಯು ದಿಟ್ಟಿಸುತ
ಬಲ್ಮೆಯಲಿ ಕಿವಿದೊರೆಗೆ ತೂಗಿ ಬಿ–
ಡಲ್ಮಹಾಸ್ತ್ರಜ್ವಾಲೆ ಜಗನ ಸು–
ಡಲ್ಮಹಾರಭಸದಲಿ ಬಡಬಾಗ್ನಿಯೊಲು ರಂಜಿಸಿತು ೧೩

ಘನತರ ಜ್ವಾಲಾಯ ಮಹಾಸ್ತ್ರವು
ಮನಸಿಜಾರಿಯ ಪೊಡೆಯಲಾಕ್ಷಣ
ವನುವರಿದು ಡಮರುಗದೊಳಿಕ್ಕಡಿಗೈಯೆ ಶಂಕರನು
ಮನದಿ ಸಿಡಿಮಿಡಿಗೊಂಡು ನೋಡುತೆ
ತನು ಬಿರಿಯೆ ಹದಿನಾರು ಶರದಲಿ
ತಣುಗದಿರ ತಲೆದೂಗಲೆಚ್ಚನು ಕಲಿಜಲಂಧರನು ೧೪

ಶರದ ಘಾಯುವ ಲೆಕ್ಕಿಸದೆ ಕಡು
ಭರದಿ ಬಾಣಗಳಿಂದೆ ದಾನವ
ನುರಕೆ ಪೊಡೆಯಲು ಮಧ್ಯದಲಿ ಖಂಡಿಸುತಲಾಕ್ಷಣದೆ
ನೊರೆವ ಭೋಗಿಪನಂತೆ ನೇತ್ರದೊ
ಳುರಿಯ ಸೂಸುತ ಮುಗುಳಿ ಜೊಬ್ಬಿರಿ
ದುರವಣೆಯೊಳಾಹರನ ನಿಂದಿಸುತೆಂದನಿಂತೆಂದು ೧೫

ನಡತೆಯಲಿ ಸರಿಯೆಂಬೆನೇ ನೀ–
ನಡವಿ ಮುಸಣಕ್ಕೊಡೆಯು ಭಾಗ್ಯದ
ಬೆಡಗ ನಿನ್ನಲಿ ನೋಡೆ ತಿರುಕನು ನಿನ್ನ ಪಿತನಾರೊ
ಹಡೆದ ಜನನಿಯದಾರೊ ಪಾಲಿಸಿ
ದೊಡೆಯನಾವನೊ ತನ್ನ ಮಗಳನು
ವ್ಪಡನೆ ನಿನಗೊಲಿದಿತ್ತನಾವುದ ನೋಡಿ ಗಿರಿರಾಜ ೧೬

ದಾತರೊಳು ನಿಸ್ಸೀಮನೆಂಬೆನೆ
ಭೀತಿಯಲಿ ವರವಿತ್ತು ಭಸ್ಮನ
ಘಾತಿಗೊಳಿಸಿದೆ ಹರಿಯು ನಾರೀವೇಷವನು ಧರಿಸೆ
ನೀತಿಕೋವಿದನೆನಲು ನಳಿನಾ
ರಾತಿಯೊಳಗಿಹ ಕಲುಷವನು ನೆರೆ
ನೀ ತಿಳಿದು ಮಸ್ತಕದಿ ಧರಿಸಿಹೆ ಮೂಢರಂದದಲಿ ೧೭

ಮಾತೆಯನು ಸಂಹರಿಸಿದವ ಸಖ
ಭೂತ ಮಾರಿ ಪಿಶಾಚ ಪ್ರೇತ
ವ್ರಾತವೇ ನಿಜಸೇನೆಗಳು ಮುದಿಯೆತ್ತೆ ವಾಹನವು
ಖ್ಯಾತನೆಂಬೆನೆ ಯಜನದೊಳು ಸ–
ಪ್ರೀತಿಯಲಿ ತೊಡಗಿರ್ದ ದಕ್ಷನ
ಖಾತಿಯಿಂ ಕೊಲ್ಲಿಸಿದೆ ನಿನ್ನಯ ಸತಿಯು ಸಲುವಾಗಿ ೧೮

ಹರಿಯುದಿರಲೆಂದನುತ ಚರ್ಮಾಂ
ಬರವ ಧರಿಸಿಹೆ ಮಾನವಿಲ್ಲದೆ
ಮುರಿಯದಿರಲೆಂದೆನುತ ಗಿರಿಯನು ಮನೆಯ ಮಾಡಿರುವೆ
ಪರರು ಬೇಡುವರೆಂದು ನೀನೇ
ತಿರುಪವೆತ್ತುತಲಿರ್ಪೆ ಯಿದನರಿ
ದರಿದು ನಿನ್ನನ್ನು ನಂಬಿ ಕೆಟ್ಟರು ದಿವಿಜರಿಂದಿನಲಿ ೧೯

ವಾರಣಾಸ್ಯನಿಗಾಖುವಾಹನ
ವಾರುಮೊಗ ತಾ ನವಿಲನೇರುವ
ಸೇರಲೊಂದೆಡೆಯೊಳಗೆ ಶಿಖಿ ಮೂಷಿಕವ ನುಂಗುವುದು.
ತೋರೆ ನಿನ್ನದು ಸಾಧು ವೃಷಭವು
ಕ್ರೂರಸಿಂಗವೆ ಸತಿಗೆ ವಾಹನ
ಮಾರಿ ಹಗರಣ ತೊಳಸುಬಳಸೀ ನಿನ್ನ ಸಂಸಾರ ೨೦

ಕೇಳುತಿರ್ದನು ಭೃಂಗಿಯೀತನ.
ಕೀಳ ಭಾಷೆಗಳೆಲ್ಲವನು ಕರು
ಣಾಳುವಿನ ಮೊಗನೋಡಿ ಖತಿಯೊಳು ಪೇಳ್ದನಿಂತೆಂದು
ಖೂಳ ನಿಲ್ಲಿಸು ಸಾಕು ನಿನ್ನಯ
ನಾಲಿಗೆಯನೀ ನಿಮಿಷಪ್ರತುದಿ
ಸೀಳಿ ಬಿಸುಡುವೆ ದೇವ ದೇವನ ಮತ್ತೆ ತೆಗಳಿದೊಡೆ ೨೧

ಪರಮಪುರುಷನ ಮಹಿಮೆಗಳ ನೀ
ನರಿಯದೆಯೆ ಗಳಹುತಿಹೆ ನಂಬಿದ
ಚರಣಭಕ್ತರ ಪಾಲಿಸಲು ನೀಪರಿಯೊಳಿಹನೆಲವೊ
ಮರುಳೆ ನಿನ್ನೊಡನೇಕೆ ಮಾತಿ
ನ್ನರಘಳಿಗೆ ಸೈರಿಸೆಲೊ ನಿನ್ನಯ
ಶಿರವ ಧರಣಿಗೆ ಕೆಡಹಿ ಲೋಕಕೆ ಮುದವನೀಯುವನು ೨೨

ಆ ಸಮಯದಲಿ ನಾರದನು ಜಗ
ದೀಶನಂಘ್ರಿದ್ವಯವ ನುತಿಸುತೆ
ವಾಸವಾರಿಯ ಸನಿಹಕೈತಂದೊರೆದನಿಂತೆಂದು
ಈ ಸಮಸ್ತರು ನಿನಗೆ ಪರಿಚಿತ
ರೀಸಮೂಹದೊಳೊರ್ವನಿಲ್ಲಾ
ನೋಸಕಾರಿಯ ತಿಳಿದು ಪೇಳೆಂದೆನುತಲೆಚ್ಚರಿಸೆ ೨೩

ಬಿಲ್ಲು ಬಾಣಗಳೊಡನೆ ಗಗನದೊ
ಳೆಲ್ಲರನು ಯೀಕ್ಷಿಸುತ ಕೇಶವ
ನಿಲ್ಲದಿರೆ ತಾ ಕಂಡು ನುಡಿದನು ಮುನಿಪ ಕೇಳ್ರಮೆಯ
ವಲ್ಲಭನ ಕಾಣದಿಹೆನಾತನ
ದೆಲ್ಲಿಹನು ಪೇಳೆನಲು ಮುನಿ ಮನ
ದಲ್ಲಿ ನಗುತಲಿ ಪೇಳ್ದನಸುರನು ಚಿಂತೆಗೊಳ್ವಂತೆ ೨೪

ದಾನವೇಶ್ವರ ಕೇಳು ಸಮರಕೆ
ನೀನು ಬಿಜಯಂಗೈದುದರಿಯುತ
ತಾನಿಹನು ಹರಿ ನಿನ್ನ ರೂಪದಿ ಬೃಂದೆಯೊಡನೆನುತ
ಮೌನಿ ನುಡಿಯಲು ಕೇಳಿ ತನ್ನಯ
ಮಾನಿನಿಯ ಸತಿಧರ್ಮಕೀ ಪರಿ
ಹಾನಿಯಾಯ್ತೇ ಹಾಯೆನುತ ದಾನವನು ಬಿಸುಸುಯ್ದ ೨೫

ಸನ್ನುತಾಂಗಿಯನಿಂತು ಮೋಸದಿ
ಚನ್ನಕೇಶವ ಮರುಳುಗೊಳಿಸಿದ
ಮುನ್ನ ಸತಿಗರುಹದೆಯೆ ಬಂದುದಕಾಯ್ತು ತತ್ಫಲವು
ಎನ್ನಲುವೊ ದೌರ್ಭಾಗ್ಯರಾರುಂ
ಟೆನ್ನ ಜೀವಿಸಲೇನಹುದು ಮ-
ತ್ತಿನ್ನೆನಿತು ಚಿಂತಿಸಲು ಫಲವೇನೆನುತ ಮರುಗಿದನು ೨೬

ಜಾರಿದುದು ಕರದಿಂದೆ ಚಾಪವು
ತೋರಿತಪಶನಳುಗುಕ ತಾಪಕೆ
ಸೂರೆಯಾದುದು ಚಿತ್ತವಿಮ್ಮಡಿಯಾಯ್ತು ಕ್ರೋಧಾಗ್ನಿ
ಹಾರಿತೆಡಭುಜ ನಯನಗಳು ಸೀ–
ರೂರಿದವು ಕಂಪಿಸಿದುವಧರವು
ಶೌರಿಯೊಳು ಕಡುರೋಷವುಕ್ಕಿತು ಕಲಿಜಲಂಧರಗೆ ೨೭

ಪುರಕೆ ಹಿಂದಿರುಗುತ್ತ ಹರಿಯನು
ತರಿದು ಬಿಸುಡುವೆನೆಂಬೆನೇ ಸಂ–
ಗರದಿ ಪಾಲಾಯನವ ಪಡಿಸಿದನೆಂಬೀರಸುರರಿ
ತೆರಳದಿಲ್ಲಿಯೆ ನಿಲ್ಲೆ ಮಾನಸ
ದುರಿಯು ಶಾಂತಿಯನಾನದದಂ
ತರುಣಿಯಾಸೆಯುದೆರವು ಹರನೊಳೆ ಮರಣ ಸುಸ್ಥಿರವು ೨೮

ಎಂತು ಸಹಿಸುವೆನಕಟ ನೇಹದಿ
ಸಂತತವು ಸೇವಿಸುತಲಿರ್ದಾ
ಕಾಂತೆಗಾನೇ ಮೃತ್ಯುವಾದೆನು ನಿಜವನರುಹದೆಯೆ
ಇಂತು ವಿಧಿ ಬರೆದಿರ್ದುದೆನುತಲಿ
ಚಿಂತಿಸುತಲಿರೆ ಕಂಡು ನುಡಿದನು
ಕಂತುಹರನೆಲೆ ಜೀವದಾಸೆಯುದಿರಲು ಶರಣಾಗು ೨೯

ಈಶನೀ ರೀತಿಯೊಳು ನುಡಿಯಲು
ವಾಸವಾರಿಯು ಕೇಳ್ದು ಚಿತ್ತ
ಕ್ಲೇಶವನು ಬದಿಗೊತ್ತಿ ಕೂರ್ಗಣೆಗಳನು ಕಾರ್ಮುಳೆ
ರೋಷದಿಂದಳವಡಿಸುತುರುತರ
ಭೀಷಣದಿ ಬೊಬ್ಬಿರಿಯುತಂಬರ
ಕೇಶನಂಗೋಪಾಂಗದಲಿ ಕೀಲಿಸಿದ ಶರಶತವ ೩೦

ದಕ್ಷನಾಶಕ ಕಡು ಕುಪಿತಹ
ರ‍್ಯಕ್ಷನಂತುರಿದೆದ್ದು ಗರ್ಜಿಸು
ತಕ್ಷಯದ ತೂಣೀರದಿಂದನಲಾಸ್ತ್ರವನು ತೆಗೆದು
ಅಕ್ಷಿಗಳು ಕೆಂಪಡರೆ ದೈತ್ಯನ
ಶಿಕ್ಷಿಸಲು ಕೇಳ್ಮರುಳೆ ನಿನ್ನನು
ರಕ್ಷಿಸುವ ದೈವವನು ನೆನೆಯೆಂದಾಕಿ ಸೆಳೆದಿಟ್ಟ ೩೧

ಭುಗಿಭುಗಿಲು ಭುಗಿಲೆಂದು ಮುಖದೊಳು
ಹೊಗೆಯುರಿಯನುಗುಳುತ್ತ ಗಭಸದಿ
ಜಗಕೆ ಭೀತಿಯ ಬೀರುತೈತರುತಿರೆ ಮಹಾಸ್ತ್ರವದ
ಅಗಡುದೈತ್ಯನ ಧೈರ್ಯವೆಂತುಟೊ
ತೆಗೆದು ಪಾಶಧರಾಸ್ತ್ರವನು ಲಗು
ಬಗೆಯ ತವಕದೊಳೆಚ್ಚು ತಂಪಿಸುತಾರ್ದು ಬೊಬ್ಬಿರಿದ ೩೨

ನಿಂದು ಕಾದಿದರೊಮ್ಮೆ ಕಡು ಖತಿ
ಯಿಂದ ಕಾದಿದರೊಮ್ಮೆಯಸ್ತ್ರಗ-
ಳಿಂದ ಕಾದಿದರೊಮ್ಮೆ ಭುಜಗಳ ಹೊಯ್ಲರೊಮ್ಮೊಮ್ಮೆ
ಇಂದುಶೇಖರನೊಡನೆ ವೀರ ಜ
ಲಂಧರನು ಹಗಲಿರುಳು ಘನ ಮದ
ದಿಂದ ಕಾದುತಲಿರ್ದ ಚಾತುರ್ಮಾಸವೆಡಬಿಡದೆ ೩೩

ಪ್ರಮಥ ಗಣವಚ್ಚರಿಯ ತಾಳುತ
ಲಮಮ ಮೋಣಿವನಂತೆ ಭೀಕರ
ಸಮರಸಾಹಸಮಲ್ಲನನು ನಾವರಿಯೆವಿದುವರೆಗೆ
ಸುಮಶರಾರಿಯ ಪೌರುಷಕೆ ಸರಿ
ಸಮನಿಹನು ಭಾಪೆನುತ ಪೊಗಳಲು
ಸುಮನಸರ್ಮರುಗಿದರು ಕಳವಳಗೊಂಡು ಚಿತ್ತದಲಿ ೩೪

ಪಾವನಾತ್ಮನೊಳಧಿಕ ರೋಷದಿ
ದೇವವೈರಿಯು ಕಾಡುತಿರೆ ವರ
ದೇವತತಿ ಶಂಕರನನುತಿಸುತ ಪೇಳ್ದರಿಂತೆಂದು
ಸಾವಕಾಶವಿದೇಕಿಸಿತು ಮಹಿ
ಮಾವಲಂಬನೆ ವಧಿಸಿ ದೈತ್ಯನ
ಕಾವುದೆಮ್ಮನು ಕರುಣದಿಂದೆನೆ ಕೇಳ್ದು ಕಾಮಾರಿ ೩೫

ಕಟ್ಟಿದನು ಗಜ ಚರ್ಮವನು ಜಗ
ಜಟ್ಟಿ ಧೂರ್ಜಟಿ ಶೂಲವನು ತೆಗೆ
ದಿಟ್ಟು ದಿವ್ಯಾಸ್ತ್ರವನು ಪೂಡಿದ ವರಪಿನಾಕದಲಿ
ಮೊಟ್ಟಮೊದಲದರೊಳು ವಿಧಾತನ
ನಟ್ಟನಡುವಲಿ ಹರಿಯನಿಲಿಸುತೆ
ತುಟ್ಟತುದಿ ಮೊನೆಯೊಳಗೆ ತಾನೇ ವ್ಯಾಪಿಸಿದ ಹರನು ೩೬

ಮೃಡನ ಕಾರ್ಯವಕಂಡು ದೈತ್ಯನು
ಪಢಪಢೆನುತಲಿ ತಿರುಹಿ ಮೀಸೆಯ
ಪಿಡಿದು ಚಾಪವನಧಿಕ ರೋಷದಿ ನಿಂದುಮಾರಾಂತು
ಕಿಡಿಯ ಸೂಸುವ ಶರದ ಶಕ್ತಿಗೆ
ಪೊಡವಿ ಕುಸಿದುದು ಕಡಲು ಕುದಿದುದು
ಸಿಡಿದವದ್ರಿಗಳುರುಭಯದಿ ನಡುಗಿತು ಜಗತ್ರಯವು ೩೭

ಬೆಚ್ಚಿತಾನಳುಕಿದನೆ ಯುಕ್ಕುವ
ಕೆಚ್ಚುಕರಗಿತೆ ಮೃಡನ ಶರವನು
ನುಚ್ಚುನೂರಾಗಿಸುವೆನೆನ್ನುವ ಫಲದಲಿರೆಧನುವಂ
ಉಚ್ಛಳಿಸಿ ಸಾಯಕವು ಸುಡುತಿಹ
ಕಿಚ್ಚನುಗುಳುತೆ ಬಂದುಜಗಕತಿ
ಕೆಚ್ಚೆದೆಯ ದಾನವನ ಶಿರವನು ಕೊಚ್ಚಿದುದು ಭರದಿ ೩೮

ಪಾಕಶಾಸನ ವೈರಿವರ ಕಾ
ರ್ತೀಕಶುದ್ಧ ದ್ವಾದಶಿಯ ದಿನ
ಲೋಕ ಚಕ್ಷುವಿನುದಯ ಸಮಯದಿ ಘೋರ ಸಮರದಲಿ
ಲೋಕಕಚ್ಚರಿ ಯೆನಿಸಿಪ ಶೌರ್ಯದಿ
ಲೋಕ ಪಿತನಸ್ತ್ರದಲಿ ಮಡಿಯೆ ಪಿ
ನಾಕಧರಜಯವೆನುತ ಕರೆದರು ಸುರರು ಪೂಮಳೆಯ ೩೯

ಮಾರಹರ ನುರಿಗಣ್ಣ ಕಿಡುಗಿಡಿ
ವಾರಿಧಿಯ ಶಿಶುವಾಗಿ ದನುಜಾ
ಕಾರದಿಂ ಮಿಗೆ ಪೆರ್ಚಿ ವಿಬುಧರ ಪಿರಿದು ಬಳಲಿಸುತ
ಶೂರತನದಿಂ ಕಾದಿ ಸತ್ವವ
ತೋರಿ ರಣಸೆನೊಳು ಮರಣವೈದಲು
ಭೂರಿ ಹರುಷದೊಳೀಶನನು ನುತಿಸಿತು ಜಗತ್ರಯವು ೪೦

ವನವ ಸುಡುವದವಾಗ್ನಿಕಣವೇ
ವನವನೆಲ್ಲವ ನುರುಹಿ ಕಡೆಯೊಳು
ವನದೊಳಡಗುವ ತೆರದಿ ಲೋಕಕೆ ಪಿರಿದು ಕಲಿಯೆನಿಸಿ
ದನುಜ ಮರಣವನೈದಲಾತನ
ಯನುಪಮಾತ್ಮಜ್ಯೋತಿ ಶರ್ವನ
ಸಣೆಯ ಕಣ್ಣೊಳಗೈಕ್ಯವಾದುದು ಮುನಿಪಕೇಳೆಂದ ೪೧

ಭರದಿ ದೈತ್ಯನ ವಿಕಲ ಮುಂಡವು
ಧರಣಿಯಲಿ ಪವಡಿಸಲು ನೋಡುತೆ
ಧುರದೊಳುರೆ ಬಲ್ಲಿದನು ಲೋಕದೊಳಿವನ ಸರಿಸಮರು
ಅರಿಭಯಂಕರರಿಲ್ಲಿವೆನುತವ
ನುರುತರವೆನಿಪ ಸಾಹಸವ ತಾ-
ಪಿರಿದು ಕೊಂಡಾಡುತ್ತಲಿರ್ದನು ಕಾಲಭೈರವನು ೪೨

# ಎಂಟನೆಯ ಸಂಧಿ

**ಸೂಚನೆ**

ಅರಿಪು ಪತಿ ಮರಣವನು ಬೃಂದೆಯು
ಹರಿಗೆ ಶಾಪವನಿತ್ತು ಹರಣವ
ಕೊರೆಯುತಿರಲೈತಂದನುಗ್ರಹಿಸಿದನು ಶಂಕರನು

ಇತ್ತಣ ವಿಚಾರವನು ಕೇಳ್ಮುನಿ
ಪೋತ್ತಮನೆ ನಾನೊರೆವೆ ಬೃಂದೆಯೊ
ಳತ್ಯಧಿಕ ಸಂಪ್ರೀತಿ ಸುಖ ಸಲ್ಲಾಪದೊಳಗಿರುವ
ಮತ್ತೆ ಯೊಂದಿರುಳೊಳು ಮುರಾರಿಯು
ಮತ್ತಕಾಶಿನಿಯೊಡನೆ ನಿದ್ರೆಗೆ
ತೆತ್ತು ತನುವನುಪವಡಿಸಿದ ಧನನಂತೆ ನಟಿಸುತಲಿ ೧

ಅಂದಿನರುಣೋದಯಕೆ ಮುನ್ನವೆ
ಬೃಂದೆ ಮೈತಿಳಿದೆದ್ದು ನೋಡೆ
ಮುಕುಂದನರೆನಿದ್ರೆಯಲಿ ಸ್ವಪ್ನದೊಳೆಂದ ನಿಂತೆಂದು
ಮಂದಗಾಮಿನಿ ಪದ್ಮೆಬಾ ಪೂ
ರ್ಣೇಂದುಮುಖಿ ನೀನೆನ್ನ ಮನಕಾ
ನಂದವಿತ್ತು ಕಟಾಕ್ಷಿಸೆಂದೆನೆ ಕೇಳ್ದಳಾ ಸುದತಿ ೨

ಏನಿದೇನಿದು ಯನ್ನ ಬಾಳ್ವಿಕೆ
ಗೂನವಹ ಸಂಗವನು ಬಹುಬುತೆ
ದೀನವಾಣಿಯೊಳಿಂತು ಬೇಡುತಲಿಹನು ಮತ್ಪತಿಯು
ಸಾನುರಾಗದೊಳೆನ್ನೊಳಲ್ಲದೆ
ತಾನೆಸಗನನ್ಯರೊಳು ಪ್ರೀತಿಯ
ನೀನುಡಿಯು ಮರ್ಮವನದೆಂತರಿವೆನು ಮಹಾದೇವ ೩

ಏಕಪತ್ನೀವ್ರತನಿವಿಷ್ಟನ
ಲೋಕವೇ ಕೊಂಡಾಡುತಿರ್ಪುದು
ಲೋಕದೊಳಗಿಹ ಸತಿಯರೆಲ್ಲರು ಮಾತೆಯೆಂದೆಂಬ
ಲೋಕವಮಾನಿತ ನಾದಪತಿಯುವಿ
ಲೋಕನಕೆ ಮತ್ತಾವ ಬೆಡಗಿನ
ಲೋಕ ಮೋಹಿನಿ ಸಿಲುಕಿಹಳೊ ಹಾಶಿವ ಮಹಾದೇವ ೪

ಎಂದಿಗುಂ ತಾನಿಲ್ಲದೀಪರಿ
ಸಂದೆಗವು ಮನಕಾಯ್ತು ವಲ್ಲಭ
ನಂದವನು ಪರಿಕಿಸಲು ಮೊದಲಂತಿಲ್ಲ ನಡೆನುಡಿಯು
ಇಂದುಧರನೇ ಬಲ್ಲ ಚಿತ್ತದಿ
ಹಂಹ.ಗೊಕ್ಕಳಗಾದನೇ ನಾ
ನಿಂದು ಮಾಡುವುದೇನು ದೈವವೆ ವಿಮುಖವಾಗಲ್ಕೆ ೫

ಎಂದು ಚಿಂತೆಯನೊಂದಿ ನೀರಜ
ಬಂಧು ತಲೆದೋರಿದುದ ನೋಡುತ
ಲಂದು ಮನದಲಿ ಸಂಶಯಾನ್ವಿತೆಯಾಗಿ ಕುಳ್ಳಿರಲು
ಇಂದು ಧರನೊಳು ಕಾದಿ ಮಡಿದ ಜ
ಲಂಧರನ ನಿಜಶಿರವು ಭರದಿಂ
ಬಂದು ಬಿದ್ದುದು ಶರಸಹಿತ ಬೃಂದೆಯ ಕರಾಬ್ಜದೊಳು ೬

ತೆರೆದ ಕಂಗಳ ಪೊರೆವ ರದನದ
ಉರೆ ತೊಳಗುತಿಹ ಹಣೆಯು ಶೋಭಿಪ
ವರಕಪೋಲದ ಬಿಗಿದ ಹುಬ್ಬಿನ ವೀರರಸದೊಳಗೆ
ತಿರುಹಿ ಹುರಿಮಾಡಿರ್ದ ಮೀಸೆಯ
ಮೆರವಶಿರವನು ಬೃಂದೆ ಪಿಡಿಯುತೆ
ಪರಿಕಿಸುತೆ ಹಾಯೆನುತ ದೊಪ್ಪನೆ ಬಿದ್ದಳವನಿಯಲಿ ೭

ಪತಿಯ ರುಂಡವ ಕರದಿ ಪಿಡಿದಾ
ಸತಿಯು ಬಳಿಕೆಚ್ಚತ್ತು ನಡುಗುತೆ
ಮತಿಗೆ ಕಾತರವಾಗೆ ಕಂಬನಿ ದುಂಬಿ ವಲ್ಲಭನ
ಅತಿಶಯದ ಸದ್ಗುಣವ ಪೊಗಳುತೆ
ಪತಿಯಳಿದ ತನಗಿನ್ನು ಮುಂದಿನ
ಗತಿಯದಾವುದೆನುತ್ತ ಹಂಬಲಿಸಿದಳು ಲಲಿತಾಂಗಿ ೮

ಉಕ್ಕಿದುದು ಕಂಬನಿಯು ಬೃಂದೆಗೆ
ಸುಕ್ಕಿ ಬಾಡಿತು ವದನಕಮಲವು
ಮಿಕ್ಕು ಮೀರಿತು ದುಃಖ ಹೃದಯದ ತಾಪ ವೊಡಗೂಡೆ
ಕರ್ಕಶದ ಶೂಲಿಯೊಳು ಕೋಟಿಯ
ಕಕ್ಕುಲಿತೆ ಬೇಡೆಂದು ಪೇಳ್ದೊಡೆ
ಧಿಕ್ಕರಿಸುತಡುಹದೆಯೆ ಪೋದೆಯ ರಣಕೆ ನೀನೆನುತ ೯

ಒಡೆಯದಿರ್ಪುದು ನೇತ್ರ ತಾಪವ
ತಡೆಯಲಾರದು ಜಠರ ದುಃಖದ
ಕಡಲೊಳಗೆ ಮುಳುಗಿಹೆನು ಕಾಂತನೆ ನೋಡು ಕರುಣದಲಿ
ಬಿಡು ಬಿಡೀ ಛಲವೇಕೆ ನಿನ್ನಯ
ಮಡದಿಯಲ್ಲಹೆ ನಾನು ಬೇಡುವೆ
ತಡೆಯುತಿರು ಪ್ರಾಣೇಶ ನಿನ್ನೆಡೆಗೀಗಳೈತಹೆನು ೧೦

ತಾಪವೆಗ್ಗಳಿಸಿಹುದು ಪತಿಯೇ
ಕೋಪಗೊಂಡುಪ ನರಿಯೆ ನೀನೀ
ಪಾಪಿಯನು ಸಂತೈಸಿ ಸವಿಮಾತಾಡು ದಯೆನೋರು
ಈ ಪರಿಯೊಳಾ ಸುದತಿ ಶೋಕಾ
ಲಾಪದಿಂ ಹೊರಳುತ್ತ ರಮಣನ
ರೂಪಗುಣ ವಿಕ್ರಮವ ನೆನೆಯುತ ಮೂರ್ಛೆಗೊಳಗಾಗೆ ೧೧

ಬಳಿಕ ಸತಿ ಎಚ್ಚೆತ್ತು ನಿಜಕರ
ಜಲಜದಲಿ ಪತಿ ಶಿರವ ಪಿಡಿಯುತ
ಲಳಲ ಸಂವರಿಸುತ್ತೆ ನುಡಿದಳು ಕಾಲನೇಮಿಜೆಯು
ತಿಳಿಯದಾದೆನಿದಾರ ಮೋಸವೊ
ಕಳೆದ ಜನ್ಮದಿ ಗೈದ ದುಷ್ಕೃತ
ಫಲವೊ ಪರಮೇಶ್ವರನ ಕೋಪಾನಲವೊ ವಿಧಿಕೃತವೊ ೧೨

ಎನ್ನ ರಮಣನ ರೂಪಿನಲಿ ಬಂ
ದೆನ್ನ ಪಾತಿವ್ರತ್ಯವಡಗಿಸು
ತುನ್ನತದಿ ಮನ ಮರುಳು ಗೊಳಿಸಿದನಾವನಾಗಿರಲಿ
ತನ್ನ ದುಷ್ಕೃತಫಲವ ಭೋಗಿಸ
ಲಿನ್ನು ಶಿಲೆಯಾಗಿರಲೆನುತ ಸಂ
ಪನ್ನೆ ಬೃಂದೆಯು ಹರಿಗೆ ಶಾಪವನಿತ್ತು ತಾಂಬಳಿಕ ೧೩

ಕಂಬನಿಯ ನೊರಸಿದಳು ಕರದಿಂ
ದಂಬುಜಾನನೆ ವೀರರಸದಿಂ
ತುಂಬಿಕೊಂಡಿಹ ಪತಿಯ ಶಿರವನು ಪಿಡಿದು ಬಕುತಿಯಲಿ
ಅಂಬಿಕಾಧವನ ಮಲತರ ಚರ
ಣಾಂಬುಜವ ನುತಿಗೈಯು ತನಲನ
ನಂಬಿ ನೆರೆ ಕೀರ್ತಿಸುತೆ ಶಪಥವ ಗೈದಳಿಂತೆಂದು ೧೪

ದಾನ ಧರ್ಮವನೆಸಗಿ ಹಿರಿಯರ
ಸಾನುರಾಗದೆ ಸೇವಿಸಿರ್ದೊಡೆ
ದೀನಜನಗಳನಾದರಿಸಿ ನಾಂ ಹಿತವನೆಣಿಸಿರಲು
ಮಾನಸದಿ ಮತ್ಪತಿಯೆ ಗತಿಯೆಂ
ದಾನು ನೆರೆ ನಂಬಿರ್ದೊಡೀಗ ನಿ
ಧಾನಿಸದೆ ಹುತವಹನು ತಾನೊಳಕೊಳ್ಳಲೆನ್ನಸುವ ೧೫

ಎಂದು ಕಂಗಳ ಮುಚ್ಚಿ ಹೃದಯದ
ಮಂದಿರದಿ ಪತಿಪಾದಯುಗಳವ
ನೊಂದನೇ ಜಾನಿಸುತ ಮಾರುತತಾಣಗಳ ಬಿಡಿಸಿ
ತಂದು ಶಿರದೊಳಗಿಟ್ಟು ಬಂಧಿಸಿ
ಕುಂದದಂತಾತ್ಮಾಗ್ನಿಬಲಗೊಳ
ಲಿಂದುಶೇಖರನರಿದನೀಹದನವನು ಮನದೊಳಗೆ ೧೬

ಗನ್ನತರದಳಲಿಂದೆ ಶಾಪವ
ಚನ್ನಕೇಶವಗಿತ್ತು ಗುಣ ಸಂ
ಪನ್ನೆ ತಾನಾತ್ಮಾಗ್ನಿ ಬಲಿಸುತಲಿಹಳು ನಾಂ ಪೋಗಿ
ತನ್ನ ಭಕ್ತೆಗೆ ನಿಜವನರುಹುವೆ
ನೆನ್ನುತತಿಭರದಿಂದಲಾ ಹರ
ಪನ್ನಗೇಂದ್ರಾಭರಣ ದೇವನು ಪೊರಡಲನುವಾದ ೧೭

ಮಾರವೈರಿಯ ಬಳಸಿ ಭರದೊಳು
ಸಾರಿದುದು ಸುರ ನಿಕರಖೇದದಿ
ಸೇರಿದರು ಸಿರಿ ಗೌರಿ ಶಾರದೆ ದಿವಿಜನಾರಿಯರು
ನೀರಜಾಸನ ನಿಖಿಲಮುನಿಜನ
ವಾರಣಾನನ ವರಷಡಾನನ
ಭೂರಿ ನಯನಾದ್ಯಷ್ಟದಿಕ್ಪಾಲಕರು ಕಿನ್ನರರು ೧೮

ಗರುಡಸುರಗಂಧರ್ವರಾಕ್ಷಸ
ದುರಗಚಾರಣಸಿದ್ಧವಿದ್ಯಾ
ಧರ ಸಮಸ್ತರು ನಡೆದರಮರಾವತಿಯ ಪುರದೆಡೆಗೆ
ತರುಣಿಯಿದ್ದೆಡೆಗೈದಿ ಕರುಣಾ
ಶರಧಿ ಹರನೊಲವಿಂದಲೀಕ್ಷಿಸಿ
ವರದ ಹಸ್ತವ ಮಸ್ತಕಾಗ್ರದೊಳಿಡಲು ನಿಮಿಷದಲಿ ೧೯

ಅನುಪಮಪ್ರಭೆಯಿಂದೆ ಜ್ವಲಿಸುತ
ತನುವನೆಲ್ಲವ ದಹಿಸುತಿರ್ದಾ
ಘನತರಾತ್ಮಾಗ್ನಿಯೆ ನಿಶಾಕರನಂತೆ ಧಗೆಯಡಗಿ
ತನುವಡೆಯೆ ಸತಿ ಬೃಂದೆಯಾಕೆಯ
ತನು ಮೊದಲಿಗಿಮ್ಮಡಿಯ ತೇಜದೊ
ಳನಿಬರಿಗೆ ಸೊಗಸಿತ್ತು ಮಹಿಮಾರ್ಣವನ ಕೃಪೆಗರಿದೆ ೨೦

ದೇವದೇವನೆ ಬಳಿಸುಳಿವ ಬಳಿ
ಕಾವುದಕ್ಕೊಣೆಯವು ಬೃಂದಾ
ದೇವಿಪುಲಕಿತಮನದಿ ಕಂಗಳ ತೆರೆಯಲಿದಿರಿನಲಿ
ದೇವಗಣಮಧ್ಯದಲಿ ಜಗತೀ
ಜೀವಿಗಳಿಗಾಧಾರವೆನಿಸಿಹ
ಪಾವನಾತ್ಮನ ದಿವ್ಯಮೂರ್ತಿಯ ಕಂಡು ನುತಿಸಿದಳು ೨೧

ಕಾಲಕಾಲನೆ ಕಾಮದೂರನೆ
ಕಾಲರೂಪನೆ ಪರಮಪುರುಷನೆ
ಶೂಲಧರ ಕಾರುಣ್ಯಸಾಗರ ಪತಿತಪಾವನನೆ
ನೀಲಕಂಠನೆ ನಿಗಮಗೋಚರ
ಫಾಲಲೋಚನ ಪರಮಹಂಸ ವಿ
ಶಾಲಚರಿತನೆ ವಿಬುಧವಿನುತನೆ ವಿಶ್ವವಂದಿತನೆ ೨೨

ವಿಶ್ವವೇ ತಾನಾಗಿ ತಾನಿಹ
ವಿಶ್ವವನು ಕುಕ್ಷಿಯೊಳು ಧರಿಸಿಹ
ವಿಶ್ವವನೆತಾ ಸೃಜಿಸಿ ಸಲಹುವ ಬಳಿಕ ಲಯಗೈವ
ವಿಶ್ವರೂಪದಿ ಮೆರೆಯುತಿಹ ಸ
ರ್ವೇಶ್ವರನ ಮೂರ್ತಿಯೊಳು ನಿಜಹೃದ
ಯೇಶ್ವರನ ಕಾಣುತ್ತೆ ಪೊಂಪುಳಿವೋಗಿ ನುತಿಸಿದಳು ೨೩

ಸರ್ವಮಯ ಸರ್ವಾತ್ಮ ಜಯ ಜಯ
ಸರ್ವಗತ ಸರ್ವಜ್ಞ ಜಯ ಜಯ
ಸರ್ವಶಕ್ತ ವಿರಕ್ತ ಸರ್ವೋತ್ತಮನೆ ಜಯ ಜಯತು
ಸರ್ವತಂತ್ರಸ್ವತಂತ್ರ ಜಯ ಜಯ
ಸರ್ವಪಾಪವಿನಾಶ ಜಯ ಜಯ
ಸರ್ವಮಂಗಳೆಯರಸ ಸರ್ವಾಧೀಶ ಜಯ ಜಯತು ೨೪

ನಿರುಪಮದ ಚಲ್ವಿಕೆಯ ಶಶಿಶೇ
ಖರನ ಮೂರ್ತಿಯ ನೋಡಿ ಬೃಂದೆಯು
ಕರವ ಮುಗಿದತಿಭಕ್ತಿಯಿಂದಡಿಗೆರಗಿ ನೇತ್ರದಲಿ
ಸುರಿಯಲಾನಂದಾಶ್ರು ನುಡಿದಳು
ಪರಮಸಂದರ್ಶನಕೆ ಹಿಗ್ಗುತ
ಲುರುದಯಾನಿಧೆ ಪತಿಕಳೆನ್ನನು ಸಲಹು ನೀನೆಂದು ೨೫

ತಾಯೆ ನಾರೀಮಣಿಯೆ ಕಮಲದ
ಳಾಯತಾಕ್ಷಿಯೆ ವಿಮಲೆ ಕೇಳ್ಬಾ
ರಾಯಣನು ತಾ ನಿನ್ನ ಸೇರಿದನದಕೆ ಕಾರಣವ
ಆಯತದಿ ನಾಂ ಪೇಳ್ವೆನೆಂದೆನು
ತಾ ಯುವತಿಗನುನಯನದಿ ನುಡಿದನು
ಕಾಯಜಾಂತಕನನುಲತರ ವಾಕ್ಸುಧೆಯ ಸಾರದಲಿ ೨೬

ಗಿರಿಜೆ ಸಹಿತೋಲಗದಿ ನಾನಿರೆ
ಸುರಪ ಬಂದಡಿಗೆರೆಗಿ ವಿನಯದೊ
ಳರಿಯ ಬೇಡಿದನಂದು ಬಲುಹುಂಟೆಂಬ ಘನಮದದಿ
ಭರದಿ ಕೋಪವದುದಿಸೆ ಫಾಲದೊ
ಳುರಿಯ ಕಣ್ಣನು ತೆರೆದೆನಾಕ್ಷಣ
ಮೊರಗಿದನು ಕಡುಬೇಗೆಗಾನದೆ ಬಳಲಿದುದು ಜಗವು. ೧೭

ಅದರೊಳೊಂದೇ ಕಿಡಿಯು ರಭಸದೊ
ಳುದಧಿಯೊಳು ಬೀಳಲ್ಕೆ ಶಿಶುವೊಂ
ದುದಿಸಿತಾಗಲೆ ನಿನ್ನ ಪಿತನದ ಕೊಂಡು ಸಲಹಿದನು
ಸುದತಿಯಾತನೆ ನಿನ್ನ ಪತಿಯೂ
ತ್ರಿದಶನಾಥನ ವೈರಿ ಕೇಳಾ
ಪದದಿ ಗೀಷ್ಪತಿ ಬೇಡೆ ಸುರಪತಿಗಿತ್ತೆ ಜೀವವನು ೧೮

ನಿನ್ನ ಪತಿಯನು ಕೊಲಿಸಲೋಸುಗ
ವೆನ್ನ ಬೇಡಿದ ದೇವಗುರುವಿಗೆ
ಮುನ್ನವೇ ನಾನಿತ್ತೆನಭಯವನಾದೊಡುರುತರದ
ನಿನ್ನ ಶೀಲವ್ರತದಿ ವಲ್ಲಭ
ನುನ್ನತ ಪರಾಕ್ರಮಿಯೆನಿಸೆ ವರ
ಚನ್ನಕೇಶವ ಜಗವ ಸಲಹಲು ಬಂದ ನಿನ್ನೆಡೆಗೆ ೧೯

ಭಾಮಿನೀಮಣಿ ನಿನ್ನ ರಮಣನು
ಭೀಮ ಬಲನೆಂದೆನಿಸಿ ಮೆರೆದನು
ಆ ಮಹಾಪತಿಭಕ್ತಿ ನಿನ್ನೊಳಗಧಿಕ ತರವಾಗೆ
ನೀ ಮಹಾಸತಿ ವರಪತಿವ್ರತೆ
ಕಾಮಪಿತ ಸುರನರರ ರಕ್ಷಿಪ
ನೇಮದಿಂದ್ವೈತಂವನಲ್ಲದೆ ಬೇರೆಯಲ್ಲೆಂದ ೨೦

ಸತಿಯರಿಂಗೆ ಪತಿದೈವವೆಂದಾ
ಶ್ರುತಿಯು ಸಾರುತ್ತಿಹುದು ನೀನೀ
ಕ್ಷಿತಿಗನುಷ್ಠಾನದಲಿ ತೋರಿಸಿ ಮೆರೆದೆ ಮಹನೀಯೆ
ಪತಿಯ ರೂಪದಿ ಬಂದು ನಿನ್ನೊಳು
ಕೃತಕವೆಸಗಿದ ಹರಿಯ ದೋಷವ
ಮತಿಯೊಳೆಣಿಸದೆ ಮರೆದು ಕಳೆ ನೀನಿತ್ತ ಶಾಪವನು ೩೧

ವಾಸುದೇವನ ಹೊಂದಿ ಚಾತು
ರ್ಮಾಸಗಳು ಸೇವಿಸಿದೆ ಸಾಧ್ವಿಯೆ
ಮೋಸವೆಂದರಿಯದಿರು ಕೇಳೌ ಮುಂದೆ ಕಲಿಯುಗದಿ
ತೋಷದಿಂದಲಿ ಜನರು ಚಾತು
ರ್ಮಾಸವನು ನಿಷ್ಠೆಯಲಿ ಕಳೆವರು
ಭಾಸುರಾಂಗಿಯೆ ಸುರನರಾದಿಗಳರ್ಚಿಸಲಿ ನಿನ್ನ ೩೨

ನಿನ್ನ ಪೂಜಿಸಿದರ್ಗೆ ಸುಗತಿಯು
ನಿನ್ನ ಜಾನಿಸಿದರ್ಗೆ ಕಾಮ್ಯವು
ನಿನ್ನ ಚರಿತೆಯ ಕೇಳ್ದ ಸತಿಯರಿಂಗೈದೆತನ ಚಿರವು
ನಿನ್ನ ಮಹಿಮೆಯು ಜಗದಿ ಮೆರೆಯಲಿ
ನಿನ್ನವೊಲು ಧನ್ಯರು ಧರಿತ್ರಿಯೊ
ಳನ್ಯರಿಲ್ಲೆಂದೆನಲು ಮೇಣಿಂತೆಂದಳಾ ಬೃಂದೆ ೩೩

ಎನ್ನ ವಾಕ್ಯವ ವಿಫಲ ಮಾಡದಿ
ರುನ್ನತಾಮಳಕೀರ್ತಿ ಮೃಗಧರ
ಪನ್ನಗಾರಿಧ್ವಜಗೆ ಶಾಪವನಿತ್ತೆನಾದೊಡೆಯು
ಸನ್ನುತನು ನಿಮ್ಮೆಲ್ಲರಿಗೆ ತಾ
ಮುನ್ನಿನಂತೆಯೆ ತೋರ್ಮ ಮೇಣಾ
ಗನ್ನ ಶಿಲೆಯೊಳಗಿರಲಿ ಶಿಲೆಯನೆ ಲೋಕವರ್ಚಿಸಲಿ ೩೪

ರಗಳೆ॥ ಬಿಡದೆ ನೀರ್ಗುಡಿವೊಡಂ – [1]ಮನೆಮನೆಯ ಪುಗುವೊಡಂ ।
ರಾಗರಸವಱುವೊಡಂ – [2]ಬಿಡದೆ ತಾಂ ನಲಿವೊಡಂ ॥
ಬಿಡದೆ ಕಿವಿ ಬ(ಪ)ಡಿವೊಡಂ – [3]ಎಡದೆ ಮೂತ್ರಿಸುವೊಡಂ ।
ಮಡುಗಳಂ ಪುಗುವೊಡಂ – [4]ನೆಲನಕಂಪುಣ್ಬೊಡಂ ॥
ಗೋಡೆಗಳನಡರ್ವೊಡಂ – ಮಱೆಯಾಗದೆಂದಱಿಯೆ(ಗೆ) ಅಟ್ಟಯ್ಯನಱಿಪಿದಂ
॥ ೩ ॥

ಕಂ॥ ಶ್ವಾನಂಗಳ್ ಸಂಜೆಯೊಳಂ ।
ಭಾನುವ [5]ನೋಡುತ್ತುವೂಳೆ ಕಲಹಂ ಕ್ಷ್ವಾವಂ ॥
ಮಾನಪ್ಪ [6]ಮಱೆ ಭಯಾವಹ ।
ವೇನುಂ ಸಂದೇಹಮಿಲ್ಲದಕ್ಕುಂ ಅಟ್ಟಾ ॥ ೪ ॥

ಆಳಗೆ ಮನೆಯೊಳ್ ದೇ(ದಿ)ವಸಮ ।
(ನೋ)ನೂಳೆಯೆ ನಿಂದಿರಿಸಿ ಕಡೆಯನೆಣಿಸುತೆ [7]ಬಾಸಾ ॥
ಲೀಲೆಯೊಳೆ [8]ನೀರನೊಕ್ಕೊಡೆ ।
ಗಾಲಯಮೇಲಿ(ಲ)ನಿತೆ ಸಮಯದೊಳ್ ಮಱೆಯಕ್ಕುಂ? ॥ ೫ ॥

(ಇಂತು ಶಕುನತ್ರಯಂ)

ಇಂತು ಶಕುನಾಧ್ಯಾಯಂ ತೃತೀಯಂ ೩ ಸಮಾಪ್ತಂ.

---

1 ದಿಷ್ಣನುಂ (ಧಿಷ್ಣ್ಯಮಂ?) 2 ಕ್ರಿಡುಪುದನುಱುವೊಡಂ. 3 ಯಂದಡೆಮೂ. 4 ನೆಲಕಂಪುಪಡೆಂ. 5 ನಡೆನೋಡಿ ಯೂಳೆ. 6 ಮಳೆಯ ಭಯವವೆನು ಸಂದೇ. 7 ಬಾಲವಿಪ್ರಯೊಳಗೆ. 8 ನೀರನೊಳ್ಳ ಕಾಲಮೆನಿತು ದಿವಸದೊಳು.

# ಚತುರ್ಥಾಧ್ಯಾಯಂ

## ಸಸ್ಯೋತ್ಪತ್ತಿ ನಿಮಿತ್ತಾಧ್ಯಾಯಂ

ವ|| ವಾಯುಚಕ್ರ(ನಿಮಿತ್ತ)ಮಂ ಪೇೞ್ವೆಂ—

ಉ|| ಒಪ್ಪಲನೂಲ ನೊರ್ವೊೞಿನ ಕಪ್ಪಡಮಂ ಜಿನಸಂಖ್ಯಹಸ್ತದಿಂ |
ನೇರ್ಪಡಿಸಿರ್ದ ದಂಡಿಗೆಯಮೇಲೆ ಪತಾ[1]ಕೆಯನೆಯ್ದೆ ಕಟ್ಟಿ ಪ ||
ಟ್ಟೆಪುರ್ಗೆ ನಟ್ಟನಾಸಡಿಯ ಪುಣ್ಣಿಮೆಯುಂದಿನ ಪೂರ್ವಯಾಮದೊಳ್ |
[2]ತೋರ್ಪನೆ ಗಾಳಿಯಾವ ದೆಸೆಯೊಳ್ ಸಲೆ ಬೀಸುಗುಮೆಂಬುದಂ ಬುಧರ್ || ೧ ||

ಚಂ|| ಸುರಪ ಕುಬೇರ ಶಂಕರದಿಶಾಲಿಯ ಗಾಳಿಯೊಳೊಳ್ಳಿತಕ್ಕುಮಾ |
ವರುಣನಿನಲ್ಪವೃಷ್ಟಿಯನಿಲಾಗ್ನಿಯ ಮಂಡಲದಿಂ (ಸು)ವೃಷ್ಟಿ ಕಾಲನಿಂ ||
ನಿರುತಿಯೊಳಿಲ್ಲಮೆಂದು ಮೞೆ ಯೆಣ್ದೆಸೆಯಿಂ ಬಿಡೆ ಬೀಸೆ ಗಾಳಿ ನಿ |
[3]ತ್ತರಿಸದೆ ಬೀಸಿದಂದು ಮೞೆಯಿಲ್ಲ ನೆಲಂ ಪುಡಿಪಿಟ್ಟು ಪಾಱುಗುಂ || ೨ ||

ಉ|| ಭಾವಿಸಿ ನೋೞ್ಪೊಡಾಸಡಿಯ ಪೂರ್ಣಮೆಯುಂದಿನ ಪೂರ್ವಯಾಮದೊಳ್ |
[4]ಶ್ರಾವಣಮಾದಿ ಕಾರ್ತಿಕೆವರಂ ಬಲದಿಂ ಬರೆ ಗಾಳಿಯಾದೊಡಾ ||
ಜಾವದ ತಿಂಗಳೊಳ್ [5]ಮೞೆಯೆ ಕೊಳ್ಗುಮದಲ್ಲದೊಡಿಲ್ಲದಿರ್ಪುದಂ |
ಪಾವಕಮಿತ್ರನಿಂದೆಡದೆ ಬೀಸಿದೊಡಾಯದೆ ಕೊಳ್ಳದಿರ್ಪುದಂ || ೩ ||

ಕಂ|| ಮಾರುತಿ [6]ಬೆಸಗೊಳೆ ಬೀಸಂ |
ದಾರುತಿ ಯೆಡೆಗೊಂಡೊಡಣಮೆ ಬೆಳೆಯದು ಬೆಳೆದುಂ ||
ಚೋರಾರಿ ಬಾಧೆಯಿಂದಂ |
ಧಾರಿಣಿಯೊಳ್ ಪೇೞ(ಲ್ಬೆಳ)ಸು ಕೇಡು ಸನ್ಮತಿ ಅಟ್ವಾ* || ೪ ||

ಹುತವಹಯಮನೈಋತಿ ಮರು |
ತ್ಪ್ರತತಿಯೊಳಿರೆ ಲೇಸು ಚಂದ್ರ(೧) ಭುಜ(೨) ಶಿಖಿ(೩) ಗತಿ(೪) [7]ಸಂ ||
ಯುತಮಂಗಳಮೆನೆ ಕಾಡಿಗೆ |
ಸಿತಮುಕ್ಕುಂ ತೆನೆಯೊಳೆಂದು ಪೇೞ್ದಂ ಅಟ್ವಂ? || ೫ ||

(ಇಂತು ವಾಯುಚಕ್ರ ನಿಮಿತ್ತಂ)

ವ|| ಗೋ ಪ್ರವೇಶ ಲಕ್ಷಣ(ನಿಮಿತ್ತ)ಮಂ ಪೇೞ್ವೆಂ—

ಮ|| ಎಸೆವಾಷಾಢದ ಪೂರ್ಣಮಂ ಕಳೆದು ಬಪಾರ್ಣೌಮಿಯುಂದೆಯ್ದೆ ಪೂ |
ಜಿಸಿ ಪೆರ್ಬಾಗಿಲ ಪಕ್ಕದೊಳ(ದಿ)ರ್ದು ಪಸುಗಳ್ ಪೋದೂರ್ಗೆ [8]ಬರ್ಪಲ್ಲಿ ಭಾ ||
ವಿಸೆ ಶುಭ್ರಾಭ್ರನಿಭಾಂಗ ತುಂಗ ವೃಷಭಂ ಮುಂ (ಮೇಣ್) ಪೊಕ್ಕೊಡಶ್ಯುತ್ತಮಂ |
ವಸುಧಾಚಕ್ರದೊಳಿಂಬಿನಿಂ ಮೞೆಗಳುಂ ಧಾನ್ಯಂಗಳುಂ ಪೆರ್ಚುಗುಂ || ೬ ||

---

1 ಕೆಪ್ಪೊಲೆಯ್ದೆ. 2 ತೊಟ್ಪನೆ. 3 ತ್ತರಿಸದೆಂಗಿದಂದು, ನಿಸ್ತರಿಸಿದೆಂದು ಮೞೆ. 4 ಶ್ರಪಣಮಾದಿ ಕಾರ್ತಿಕವರಂ ಬರೆದಂ ಬಿಡದೆ ಘಾಳಿ. 5 ಮಳೆಯ ಕೊಳ್ವದು ದಲ್ಲದಡೆಯಿಲ್ಲದಿಪ್ಪುದಂ. 6 ಬೆಸಗೊಳ್ವದೆ ಬೆಸನೆಮಾರುತ ವೆಡೆ. 7 ......ಸಂಯುತಮಂಗಳಂ ಮನೆ ಕಾಡಿಗೆ ಸಿತ. 8 ಬರ್ಪುದ ಭಾವಿಸಿ ನೋಡುವುದು ಸುಭ್ರಂಗತುಂಗ.

* ಇಲ್ಲಿ "ವಾಯುಚಕ್ರಂ ಸಮಾಪ್ತಂ" ಎಂದು ಒಂದು ಪ್ರತಿಯಲ್ಲಿದೆ.

ಶಿಲೆಯು ಶಾಲಿಗ್ರಾಮವಾಗಲಿ
ಕಲಿಯುಗದಿ ಪೂಜಿಸಿದ ನರರಿಂಗೆ
ಫಲಿಸುವುವು ಸಕಲಾರ್ಥಗಳು ಭವಬಂಧನಾದಿಗಳು
ಸುಳಿಯುವೆನುತಲಿ ನುಡಿಯಲನಿಬರು
ತಳೆದರತಿಸಮ್ಮುದವ ಬಳಿಕಾ
ಕಲುಷಹರ ವರಗಳನು ಬೇಡೆನೆ ನುಡಿದಳಾ ಬೃಂದೆ ೩೫

ಪತಿತ ಪಾವನ ನಿನ್ನಮಲಮೂ
ರುತಿಯು ಸಂದರ್ಶಿಸಿದ ಬಳಿಕಿ
ನ್ನಿತರ ವರಗಳ ಬೇಡಲೇಕಾದೊಡೆಯು ತ್ರಿಭುವನದಿ
ಸತಿಗೆ ಪತಿ ಪರ ದೈವವೆಂಬುದ
ಶ್ರುತಿಗಳೊರೆವುದರಿಂದೆ ನೀಂ ಮ
ತ್ಪತಿಯ ಸಾನ್ನಿಧ್ಯವನು ಕೃಪೆ ಮಾಡೆನುತ ಮಗುಳೆರಗೆ ೩೬

ಚರಣಕೆರಗಿದ ಬೃಂದೆಯನು ಪುರ
ಹರನು ನೆಗಹುತಲೆಂದ ಮೆಚ್ಚಿದೆ
ತರಳೆ ನಿನ್ನವೊಲಿಲ್ಲ ಜಗದೊಳು ಪತಿಪರಾಯಣರು
ಹರಿಯು ಶಿಲೆಯೊಳಗಿರ್ದು ನಮ್ಮೆ
ಲ್ಲರಿಗೆ ಮುನ್ನಿನ ವೋಲು ಗೈದಿಹ
ತೆರದಿ ಪೊಂದೌ ಪತಿಯೊಳೈಕ್ಯವ ಮೇಣು ಹರಿಯೊಡನೆ ೩೭

ತುಲಸಿಯೆಂಬಭಿಧಾನದಿಂ ನೀ
ನೆಲಸು ನಿರ್ಮ್ಮಿರ್ವರನು ಭಕ್ತಿಯೊ
ಳೊಲಿದು ಪೂಜಿಸಿದರ್ಗೆ ಸುಗತಿಯೆನುತ್ತನುಗ್ರಹಿಸೆ
ಲಲನೆಯಾತ್ಮಜ್ಯೋತಿ ಶರ್ವನ
ನಳಿನ ಪದದೊಳಗೈಕ್ಯವಾಗಲು
ತುಲಸಿಯಾಯ್ತಾನುವು ಹರಿಗಾವಾಸಮೆಂದೆನಿಸಿ ೩೮

ಕೇಳಿದ್ಯೆ ಮುನಿನಾಥ ಕಪಟವ
ತಾಳಿ ತುಲಸೀನಿಲಯದಲಿ ಮಾ
ಲೋಲ ಚಾತುರ್ಮಾಸವಿದ್ದೀ ಕಥೆಯ ಮಹಿಮೆಯನು
ಪೇಳಲಳವಲ್ಲಿದನು ಭಕುತಿಯೊ
ಳಾಲಿಸಿದ ಮನುಜರ್ಗೆ ಸುಗತಿಯ
ಪಾಲಿಸನು ಘನಮಹಿಮಯುತನಾ ಕಾಲಭೈರವನು ೩೯

ಲೀಲೆಯಾಂತಜನಿಂದ ಸೃಷ್ಟಿಯ
ಪಾಲನೆಯ ಹರಿಯಿಂದಲಾಗಿಸಿ
ತಾಳಿ ಲಯಕಾರ್ಯವನು ಸಕಲಕೆ ಮೂಲವಾಗಿರುವ
ಕಾಲಕಾಲ ಕೃಪಾಲವಾಲ ಕ
ಪಾಲಿ ಮಂಗಳವೆಸಗಿ ಜಗವನು
ಪಾಲಿಸಲಿ ವಿಶ್ವಾತ್ಮ ಶ್ರೀಕಂಠೇಶನತಿಹಿತದಿ ೪೦

ಸಂಪೂರ್ಣ